ಎಂಬುದಾಗಿ ಅವರು ಭಾವಿಸುತ್ತಾರೆ[1] ಆದರೆ ಡಾ ಕೃಷ್ಣ ಅವರೇ ಅನುಮಾನಿಸುವಂತೆ ಕ್ರಿ ಶ ೮೫೨ರವರೆಗೂ ಎರೆಗಂಗ ನೀತಿಮಾರ್ಗನು ಆಳುತ್ತಿದ್ದನೇ ಎಂಬುದೇ ಸಮಸ್ಯೆ ಕ್ರಿ ಶ ಸು ೮೫೩–೮೭೦ರಿಂದಲೇ ಇಮ್ಮಡಿ ನೀತಿಮಾರ್ಗ ಎರೆಗಂಗನು ತನ್ನ ದೊಡ್ಡಪ್ಪ ಇಮ್ಮಡಿ ರಾಚಮಲ್ಲನೊಂದಿಗೆ ಸೇರಿ ರಾಜ್ಯವಾಳುತ್ತಿದ್ದನೆಂಬುದು ತಿಳಿದಿರುವುದರಿಂದ ಶಾಸನವು ಈ ಅರಸನಿಗೆ ಸೇರಿದ್ದಿರಬಹುದು ಆದರೆ ಈ ಅಭಿಪ್ರಾಯವನ್ನಾಗಲೀ ಡಾ ಕೃಷ್ಣರ ಅಭಿಪ್ರಾಯವನ್ನಾಗಲೀ ಆಧಾರ ಪೂರ್ವಕವಾಗಿ ಸಮರ್ಥಿಸಲು ಸಾಧ್ಯವಿಲ್ಲ

ಕ್ರಿ ಶ ೯೬೩ರ ಮಂಗಲದ ಶಾಸನವು (ಚಾ ನ ೧೩೮) ಇಮ್ಮಡಿ ಮಾರಸಿಂಗನದು ಪೆರ್ಮಾಡಿಯು ರಾಜಾದಿತ್ಯನ ಮೇಲೆ ನಡೆಸಿದ ಯುದ್ಧವನ್ನು ತಿಳಿಸುವ ೯೭೧–೭೨ರ ಚಾ ನ ೭೯ನೆಯ ಶಾಸನವು ತ್ರುಟಿತವಾಗಿದ ಈ ಪೆರ್ಮಾಡಿಯು ಇಮ್ಮಡಿ ಮಾರಸಿಂಗನೆಂಬುದು ಸ್ಪಷ್ಟ ಶಾಸನದಲ್ಲಿ ಉಲ್ಲೇಖಗೊಂಡಿರುವ ಗಂಗಚಕ್ರಾಯುಧ ಎಂಬುದು ಮಾರಸಿಂಹನ ಗಂಗವಜ್ರ, ಗಂಗಚೂಡಾಮಣಿ ಗಂಗವಿದ್ಯಾಧರ ಮುಂತಾದ ಬಿರುದುಗಳಂತೆಯೇ ಇದೆ ಮಧ್ಯಭಾಗದಿಂದ ಶಾಸನವು ನಷ್ಟಹೊಂದಿದ್ದು, ಹೋರಾಟದ ವಿವರಗಳು ತಿಳಿದುಬರುವುದಿಲ್ಲ ಇಲ್ಲಿ ಕಟ್ಟುವಪ್ಪುವಿನ ಉಲ್ಲೇಖವಿದೆ ಶ್ರವಣಬೆಳಗೊಳದ ಚಂದ್ರಗಿರಿಯೇ ಈ ಕಟ್ವಪ್ಪು

ಪಿ ವ ೧೩೩ರಲ್ಲಿ ಸತ್ಯವಾಕ್ಯಪೆರ್ಮಾನಡಿಯು ಗಂಗವಾಡಿ–೯೬೦೦೦ ಪ್ರದೇಶವನ್ನಾಳುತ್ತಿದ್ದನೆಂದು ಹೇಳಲಾಗಿದೆ ಶಾಸನದ ಕಾಲ ಕ್ರಿ ಶ ೯೭೭–೭೭ ಇಮ್ಮಡಿ ರಾಚಮಲ್ಲನೇ ಈ ಸತ್ಯವಾಕ್ಯ

೯೯೯–೧೦೦೦ದ ಚಾ ನ ೮೩ ಗೋವಿಂದರನೆಂಬ ಹೆಸರಿನಿಂದಲೂ ಪರಿಚಿತನಾದ ನೀತಿಮಾರ್ಗಪೆರ್ಮಾನಡಿಯು ಶಾಸನ ಚಿಕ್ಕಮಗಳೂರ ಶಾಸನವೊಂದರಲ್ಲಿ ಕಂಡುಬರುವ ನೀತಿಮಾರ್ಗ ರಾಚಮಲ್ಲನೇ ಈ ಅರಸನೆಂಬುದಾಗಿ ಶ್ರೀಯುತರಾದ ಎನ್ ಎಲ್ ರಾವ್ ಮತ್ತು ಆರ್ ಎಸ್ ಪಂಚಮುಖಿಯವರು ಗುರುತಿಸುತ್ತಾರೆ[2] ಶಾಸನಪಾಠ ಸರಿಯಾಗಿ ಇಲ್ಲದಿದ್ದುದೇ ಪ್ರಾಯಶಃ ಇದಕ್ಕೆ ಕಾರಣವೆನ್ನಬಹುದು ಮೂಲವನ್ನು ಪರೀಕ್ಷಿಸಿ ಪ್ರಕಟಿಸಿರುವ ಈಗಿನ ಶಾಸನಪಾಠದಲ್ಲಿ ಗೋವಿಂದರದೇವನ ಹೆಸರು ಸ್ಪಷ್ಟವಾಗಿದೆ ನೊಳಂಬನ ಸೋದರಿಯೂ ಗೋಜಿಟ್ಟರದೇವನ ಪತ್ನಿಯೂ ಆದ ಪಲ್ಲವ ರಾಜಪುತ್ರಿಯೊಬ್ಬಳೂ ಈ ನೀತಿಮಾರ್ಗನೂ ಸೇರಿ ದತ್ತಿ ಬಿಟ್ಟರೆಂದು ರೈಸ್ ಅಭಿಪ್ರಾಯಪಟ್ಟರು ಆದರೆ, ಈಕೆಯು ಗೋವಿಂದರನ ಪತ್ನಿಯೇ (ಗೋಬಿನ್ದರದೇವನ ಮನೋನಯನ ವಲ್ಲಭೆ) ದಾನ ನೀಡಿದವರು ಪೆರ್ಮಾನಡಿ ಹಾಗೂ ಪೃಥುವಬ್ಬರಸಿ ಇವರಿಬ್ಬರೂ ಪತಿಪತ್ನಿಯರೆಂಬುದು ಸ್ಪಷ್ಟ ಈ ಪೃಥುವಬ್ಬರಸಿ ತ್ರಿಭುವನವೀರನೊಳಂಬನ ಪುತ್ರಿ ಹುಂಚ ಶಾಸನದಲ್ಲಿ[3] ಇಮ್ಮಡಿ ಬೂತುಗನ ವಂಶಾವಳಿಯನ್ನು ಇತರ ಗಂಗ ಶಾಸನಗಳಲ್ಲಿ ಕಂಡುಬರುವ ವಂಶಾವಳಿಗಳಿಗಿಂತ ಸ್ವಲ್ಪ ಭಿನ್ನರೀತಿಯಲ್ಲಿ ಕೊಟ್ಟಿದೆ, ಇದರ ಪ್ರಕಾರ ನೀತಿಮಾರ್ಗಗೋವಿಂದರ ಇಮ್ಮಡಿ ಬೂತುಗನ ಮಗ ಹಾಗೂ ಇಮ್ಮಡಿ ಮಾರಸಿಂಹನ ತಮ್ಮ ಪ್ರಸಕ್ತ ಶಾಸನೋಕ್ತ ಗೋವಿಂದರನು ಪ್ರಾಯಶಃ ನೀತಿಮಾರ್ಗಗೋವಿಂದರನೇ ಇರಬೇಕು ಗೋವಿಂದರನ ಮಾವ ತ್ರಿಭುವನವೀರನೊಳಂಬ ಯಾರು ಎಂಬುದು ತಿಳಿಯದು ಈತ ಕ್ರಿ ಶ ೯೯೭ರ ಎರಡು ಶಾಸನಗಳಲ್ಲಿ ಕಂಡುಬರುವ ವೀರಮಹೇಂದ್ರನೇ ಆಗಿರಬಹುದಾದ ಸಾಧ್ಯತೆ ಇದೆ[4]

## ಕಲ್ಯಾಣದ ಚಾಲುಕ್ಯರು

ನೇರವಾಗಿ ಯಾವೊಬ್ಬ ಅರಸನನ್ನು ಹೆಸರಿಸುವುದಿಲ್ಲವಾದರೂ ಈ ರಾಜಮನೆತನದ್ದೆಂದು ಹೇಳಬಹುದಾದ ಎರಡು ಶಾಸನಗಳು ಈ ಸಂಪುಟದಲ್ಲಿವೆ ಚಾಳುಕ್ಯ ಪೆರ್ಮಾಡಿಯ ಅಳ್ವಿಕೆಯನ್ನು ತಿಳಿಸುವ ಚಾ ನ ೪೦ರ ಕಾಲ ಶಕವರ್ಷ ೯೧೬ ವಿವರಗಳು ಕ್ರಿ ಶ ೯೯೩ ಮಾರ್ಚಿ–ಏಪ್ರಿಲ್‌ಗೆ ಹೊಂದುತ್ತವೆ ಈ ಅರಸ ಪಶ್ಚಿಮ ಚಾಲುಕ್ಯ ಮನೆತನಕ್ಕೆ ಸೇರಿದ ಇಮ್ಮಡಿ ತೈಲ ಎಂದು ಊಹಿಸಿರುವುದು ಸಮಂಜಸವಾಗಿಯೇ ಇದೆ

---

[1] ಎಪಿ ಇ ಆರ್ ೧೯೩೦ ಪು ೧೯೫

[2] ಕರ್ನಾಟಕದ ಅರಸುಮನೆತನಗಳು ಪು ೨೦೦–೨೦೩

[3] ಎ ಕ VIII ನಗರ 35

[4] ಎನ್ ಎಲ್ ರಾವ್ ಮತ್ತು ಆರ್ ಎಸ್ ಪಂಚಮುಖಿ, ಪೂರ್ವೋಕ್ತ, ಪು ೨೨೦ ಮತ್ತು ವಂಶಾವಳಿ ಪಟ್ಟಿ ಪು ೨೨೩

ಕ್ರಿ ಶ ೯೯೭–೯೮ರ ಕುಡಕೂರ ಶಾಸನ (ಪಿ ಪ ೯೩) ಚಾಲುಕ್ಯ ಪೆರ್ಮಾನಡಿಯ ಮಗಳಾದ ಪಂಪಾದೇವಿಯ ಆಳ್ವಿಕೆಯನ್ನು ಉಲ್ಲೇಖಿಸುತ್ತದೆ "ಫ್ಲೀಟ್ ಆಕೆಯನ್ನು ಸತ್ಯಾಶ್ರಯನ ಮಗಳೆಂದು ಗುರುತಿಸಿರುವುದು ಸರಿಯಾಗಿಲ್ಲದಿದ್ದಲ್ಲಿ ಆಕೆ ಗಂಗರಸನೊಬ್ಬನ ಪತ್ನಿಯಾಗಿದ್ದು, ಈ ಕಾಲಕ್ಕೆ ವಿಧವೆಯಾಗಿದ್ದಳು" ಎಂದು ರೈಸ್ ಅಭಿಪ್ರಾಯಪಡುತ್ತಾರೆ[1] ಬಿದರಗಡ್ಡಿ ಶಾಸನವು[2] ಕುಂದರಾಜನ ಪತ್ನಿಯಾದ ಪಂಪಾದೇವಿಯು ಜಿಡುಗೂರು ಗ್ರಾಮವನ್ನು ಆಳುತ್ತಿದ್ದುದನ್ನು ಉಲ್ಲೇಖಿಸುತ್ತದೆ ಈ ಶಾಸನದ ಕಾಲ ತಿಳಿದಿಲ್ಲವಾದರೂ ಕ್ರಿ ಶ ೧೦೧೫ರಲ್ಲಿ ಪಟ್ಟಕ್ಕೆ ಬಂದ ಇಮ್ಮಡಿ ಜಯಸಿಂಹನ ಆಳ್ವಿಕೆಯ ಕಾಲಕ್ಕೆ ಸೇರುತ್ತದೆ ಕುಡಕೂರು ಮತ್ತು ಬಿದರಗಡ್ಡಿ ಶಾಸನಗಳಲ್ಲಿ ಕಂಡುಬರುವ ಇಬ್ಬರು ವ್ಯಕ್ತಿಗಳೂ ಒಬ್ಬರೇ ಆಗಿರುವ ಸಾಧ್ಯತೆ ಉಂಟು[3] ರೈಸ್‌ರವರು ಸಂದೇಹಿಸಿರುವಂತೆ ಈಕೆ ಪ್ರಾಪ್ತವಯಸ್ಕಳಾಗಿರದ ಕಾರಣ ಕ್ರಿ ಶ ೯೯೭ರವರೆಗೂ ಮದುವೆಯಾಗಿರದೆ ಅನಂತರ ಕುಂದಮರಸನನ್ನು ಮದುವೆಯಾಗಿರುವ ಸಾಧ್ಯತೆ ಉಂಟು ಇದನ್ನು ಒಪ್ಪಿಕೊಂಡಲ್ಲಿ ಸತ್ಯಾಶ್ರಯನ ಅಳಿಯನಾದ ಕುಂದಮರಸನನ್ನು ಅವನ 'ಪುತ್ರ' ಎಂದು ಕರೆದಿರುವುದಕ್ಕೆ ಕಾರಣ ದೊರೆತಂತಾದುತ್ತದೆ

## ಚೋಳರು

ಚೋಳರ ಸುಮಾರು ಹನ್ನೆರಡು ಶಾಸನಗಳು ಈ ಸಂಪುಟದಲ್ಲಿವೆ ಇನ್ನೂ ಕೆಲವು ಚೋಳಶಾಸನಗಳಾಗಿರುವ ಸಾಧ್ಯತೆ ಇದೆ ಆದರೆ ಅವು ತ್ರುಟಿತವಾಗಿರುವುದರಿಂದ ಅವುಗಳ ಬಗ್ಗೆ ಖಚಿತವಾಗಿ ಹೇಳಲು ಸಾಧ್ಯವಿಲ್ಲ

ಇವುಗಳಲ್ಲಿ ಪ್ರಾಚೀನತಮ ಶಾಸನವು (ಚಾನ ೧೪೫) ಒಂದನೇ ರಾಜರಾಜನ ಆಳ್ವಿಕೆಯ ಕಾಲದ್ದು ಶಕ ೯೧೩ ಎಂದರೆ ಕ್ರಿ ಶ ೯೯೧ರ ಈ ಶಾಸನ ಚೋಳನಾರಾಯಣನ ವಿಜಯರಾಜ್ಯವನ್ನು ಉಲ್ಲೇಖಿಸುವುದರಿಂದ ಈ ವರ್ಷದಲ್ಲಿ ಆಳುತ್ತಿದ್ದ ಚೋಳರಸನಾದ ಒಂದನೇ ರಾಜರಾಜನೇ ಈ ಚೋಳನಾರಾಯಣನೆಂದು ಗುರುತಿಸಲಾಗಿದೆ[4] ಅವನ ಆಳ್ವಿಕೆಯ ೭ನೆಯ ವರ್ಷದಲ್ಲಿ ಎಂದರೆ ಕ್ರಿ ಶ ೯೯೧ರಲ್ಲೇ ಮೈಸೂರು ಜಿಲ್ಲೆಯ ಒಳಭಾಗದಲ್ಲಿ ಈ ಶಾಸನ ಕಂಡುಬರುವುದರಿಂದ ಆ ಕಾಲಕ್ಕಾಗಲೇ ರಾಜರಾಜನು ಈ ಭಾಗಗಳನ್ನು ಆಕ್ರಮಿಸಿಕೊಂಡಿದ್ದನೆಂಬುದನ್ನು ಸೂಚಿಸುತ್ತದೆ ನೊಳಂಬ ಹಾಗೂ ಗಂಗರ ಮೇಲಿನ ಅವನ ದಿಗ್ವಿಜಯಗಳನ್ನು ಉಲ್ಲೇಖಿಸುವ ಶಾಸನಗಳು ಅವನ ಆಳ್ವಿಕೆಯ ೮ನೆಯ ಮತ್ತು ೯ನೆಯ ವರ್ಷಗಳಿಗೆ ಸೇರಿದವು ಬಹುಮಟ್ಟಿಗೆ ಆ ಹೊತ್ತಿಗೆ ಅವನ ದಿಗ್ವಿಜಯಗಳು ಮುಕ್ತಾಯ ಘಟ್ಟವನ್ನು ತಲುಪಿದ್ದವು ಈ ಕನ್ನಡ ಶಾಸನ ಸೋಮರಾಸಿ ಭಟ್ಟಾರಕನಿಗೆ ವಿದ್ಯಾದಾನವಾಗಿ ಭೂಮಿಯನ್ನು ದತ್ತಿಬಿಟ್ಟುದನ್ನು ನಿರೂಪಿಸುತ್ತದೆ ಶಾಸನದ ಕಾಲನಿರೂಪಣೆ ಮತ್ತು ಅದರ ಕನ್ನಡ ಭಾಷೆ ಚೋಳರು ಈ ಭಾಗಗಳಲ್ಲಿ ತಮ್ಮ ರಾಜ್ಯದ ಆಡಳಿತವ್ಯವಸ್ಥೆಯನ್ನು ಇನ್ನೂ ಜಾರಿಗೆ ತಂದಿರಲಿಲ್ಲವೆಂಬುದನ್ನು ಬಹುಶಃ ಸೂಚಿಸುತ್ತವೆ ಹೊಂಗನೂರಿನಲ್ಲಿ ದೊರೆತಿರುವ ಹೊಸಶಾಸನ (ಚಾ ನ ೧೬೭) ಕನ್ನಡ ಲಿಪಿಯಲ್ಲಿದ್ದರೂ ತಮಿಳು ಭಾಷೆಯಲ್ಲಿದೆ ಈ ಶಾಸನ ತಿರುಮಗಳ್ಪೋಲ ಎಂದು ಆರಂಭವಾಗುವ ಅರಸನ ಬಿರುದಾವಳಿಯ ಕೆಲಭಾಗಗಳನ್ನೊಳಗೊಂಡಿದೆ ಅವನ ಆಳ್ವಿಕೆಯ ಎಂಟನೆಯ ಹಾಗೂ ಅನಂತರದ ವರ್ಷಗಳ ಶಾಸನಗಳಲ್ಲಿ ಈ ಪ್ರಶಸ್ತಿ ದೊರೆಯುತ್ತದೆ ಕಾಂದಲೂರು, ವೇಂಗಿನಾಡು, ಗಂಗವಾಡಿ, ನೊಳಂಬವಾಡಿ, ದಡಿಗವಟ್ (ತಡಿಗೈಪಾಡಿ), ಇತ್ಯಾದಿಗಳ ಮೇಲಿನ ಅವನ ವಿಜಯವನ್ನು ಈ ಶಾಸನ ಉಲ್ಲೇಖಿಸುವುದರಿಂದ ಇದು ಚಾ ನ ೧೪೫ಕ್ಕಿಂತ ಕೆಲವು ವರ್ಷಗಳ ಈಚಿನದಾಗಿದ್ದು ಆ ಕಾಲಕ್ಕೆ ಈ ಭಾಗಗಳೆಲ್ಲ ಅವನ ಅಧೀನಕ್ಕೆ ಒಳಪಟ್ಟಿದ್ದವೆಂಬುದನ್ನು ಇದು ಸೂಚಿಸುತ್ತದ

ಈ ಸಂಪುಟದಲ್ಲಿ ರಾಜೇಂದ್ರಚೋಳನ ಎರಡು ಶಾಸನಗಳಿವೆ ಕ್ರಿ ಶ ೧೦೧೬ಕ್ಕೆ ಸೇರುವ ಚಾನ ೪೦೯ ಇವುಗಳಲ್ಲೊಂದು ತುಱುಗಾಳಗವನ್ನು ಉಲ್ಲೇಖಿಸುವ ಈ ಶಾಸನದ ಬಹುಭಾಗ ಸವೆದಿದೆ ಹು ೪ ರಾಜೇಂದ್ರಚೋಳನ ೯ನೇ ಆಡಳಿತವರ್ಷಕ್ಕೆ ಸೇರಿದುದು ಶಾಸನದ ಲಿಪಿ ಹನ್ನೊಂದನೆಯ ಶತಮಾನದ್ದಾಪ್ದರಿಂದ ಈ ಶಾಸನವನ್ನು ಒಂದನೇ ರಾಜೇಂದ್ರನ

[1] ಎ ಕ IV (ರೈಸ್ ಅವರ ಆವೃತ್ತಿ) ಪೀಠಿಕೆ ಪು 13

[2] ARSIE 1932–33 Bk No 9

[3] QJMS Vol xlix p 252–256

[4] ಎಂ ಎ ಆರ್ ೧೯೧೭ ಪು ೪೩

ಕಾಲಕ್ಕೆ ಸೇರಿಸಿದೆ ಆದ್ದರಿಂದ ಇವರ ಕಾಲ ಕ್ರಿ ಶ ೧೦೨೦-೨೧ ಆಗಬಹುದು ರಾಜೇಂದ್ರಚೋಳಸೆಟ್ಟಿಯು ಕಾಳಗವೊಂದರಲ್ಲಿ ಸತ್ತುದನ್ನೂ ಆತನ ಸಾವಿಗೆ ಪ್ರತೀಕಾರವಾಗಿ ಅದಕ್ಕೆ ಕಾರಣನಾದವನನ್ನು ಕೊಂದ ವಿಷಯವನ್ನೂ ಈ ಶಾಸನ ಸೂಚಿಸುತ್ತದೆ ಇಲ್ಲಿ ಕಂಡುಬರುವ ರಾಜೇಂದ್ರಚೋಳನಾಟ್ಟರಿಯೂ ಅದೇ ಸ್ಥಳದ ಇನ್ನೊಂದು ಶಾಸನ(ಹು ೫)ದಲ್ಲಿ ಬರುವ ಇದೇ ಹೆಸರಿನ ವ್ಯಕ್ತಿಯೂ ಒಬ್ಬನೇ ಇರಬೇಕು ರಾಜೇಂದ್ರಚೋಳಸೆಟ್ಟಿಯ ಹೆಸರೂ ಈ ಇನ್ನೊಂದು ಶಾಸನದಲ್ಲಿಯೂ ಇದೆ ಆದ್ದರಿಂದ ಈ ಶಾಸನವನ್ನೂ ಇದೇ ಚೋಳರಾಜನ ಕಾಲಕ್ಕೆ ಸೇರಿಸಬಹುದು

ಶಾಗ್ಯದಲ್ಲಿರುವ ಕೊ ಗಾ ೬೫ ಒಂದನೇ ರಾಜಾಧಿರಾಜನ ಶಾಸನದ ತುಂಡು ಇವರ ಕಾಲ ೧೦೪೬-೪೭ ಗಂಗೈಕೊಂಡ ಶೋಳವಳನಾಡು ಮುಡಿಗೊಂಡಶೋಳಮಂಡಲದ ಒಂದು ಭಾಗವಾಗಿತ್ತೆಂದೂ ಕುಂದುನಾಡು ಅದರ ಒಂದು ಉಪಭಾಗವಾಗಿತ್ತೆಂದೂ ಈ ಶಾಸನದಿಂದ ತಿಳಿಯಬಹುದು ಈ ಸಂಪುಟದಲ್ಲಿನ ಬೇರೆ ಶಾಸನಗಳಿಂದ ಪದಿನಾಡು (ಚಾ ನ ೧೪೬, ೧೪೭) ಮತ್ತು ಎಣ್ಣೈನಾಡು (ಚಾ ನ ೩೦೩)ಗಳೂ ಇದೇ ವಳನಾಡಿನ ಭಾಗಗಳಾಗಿದ್ದವೆಂದು ನಮಗೆ ತಿಳಿದು ಬರುತ್ತದೆ

ಮಂಗಲದಲ್ಲಿ ದೊರೆತ ಹೊಸ ಶಾಸನವು (ಚಾ ನ ೧೩೨) ಈ ರಾಜನಿಗೆ ಸೇರಿದ್ದು ೧೦೪೮-೫೦ರ ಈ ಶಾಸನದಲ್ಲಿ ತಿಙ್ಗಳೇರ್ ತರು ಎಂದು ಆರಂಭವಾಗುವ ಅವನ ಪ್ರಶಸ್ತಿಯಿದೆ ಚಾ ನ ೧೩೫ರಲ್ಲಿಯೂ ಇದೇ ಪ್ರಶಸ್ತಿಯಿದೆ ಆದರೆ ವಿವರಗಳು ಸವೆದುಹೋಗಿವೆ ಅಯ್ಯಾವೊಳಿಲ್ (ಅಯ್ಯಾವೊಳೆ)ನ ತಿಶೈಆಯಿರತ್ತೈನೂರ್ವರ ವಣಿಕ್ ಸಂಘವು ರಾಜಾಧಿರಾಜಚತುರ್ವೇದಿಮಂಗಲವೆಂಬ ಹೆಸರಿದ್ದ ಮೇಲೂರನ್ನು ಎಱಿವೀರಪಟ್ಟಣವನ್ನಾಗಿ ಮಾರ್ಪಡಿಸಿದ ಕುತೂಹಲಕರವಾದ ಸಂಗತಿಯನ್ನು ಚಾ ನ ೧೪೬ ತಿಳಿಸುತ್ತದೆ ಊರಿಂದೂರಿಗೆ ಸಂಚರಿಸುವ ವಣಿಕಸಮೂಹಗಳಿಗೆ ಇಲ್ಲಿ ಒದಗಿಸಬೇಕಾದ ಸಾಮಾನು ಸರಂಜಾಮುಗಳ ವಿವರವನ್ನು ಈ ಶಾಸನ ಕೊಡುತ್ತದೆ, ಇಂಥ ವ್ಯಾಪಾರಿಗಳಲ್ಲಿ ಮೇಲಂತಸ್ತು ಕೆಳ ಅಂತಸ್ತುಗಳನ್ನು ಗುರುತಿಸಿ ವಾಳ್ವೀರರಿಗೂ ಇವರಿಗೂ ಆಯಾ ಅಂತಸ್ತಿಗೆ ತಕ್ಕಂತೆ ಬಟ್ಟೆ ಹಂಚಬೇಕಾದುದನ್ನೂ ತಿಳಿಸಿದೆ, ವಣಿಕ್ಕೆ ಮಕ್ಕಳಿಗೆ ಎಂದರೆ ವ್ಯಾಪಾರಿಗಳ ಅಂಗರಕ್ಷಕರಿಗೆ ಇಲ್ಲಿ ತಂಗಿದ್ದಾಗ ಊಟ ಹಾಕುವುದು, ಸತ್ತ ವೀರರ ನೆನಪಿಗಾಗಿ ಹಾಕುವ ಊಟಕ್ಕಾಗಿ ಹಂದಿಯೊಂದನ್ನು ಕೊಲ್ಲುವುದು ಮುಂತಾದ ವಿವರಗಳನ್ನೂ ಇದು ಒಳಗೊಂಡಿದೆ. ಹೀಗೆ ಊರುಗಳನ್ನು ಎಱಿವೀರಪಟ್ಟಣಗಳನ್ನಾಗಿ ಪರಿವರ್ತಿಸುವ ಪದ್ಧತಿ ಇದ್ದುದು ತಮಿಳುನಾಡಿನ ಚೋಳಶಾಸನಗಳಿಂದ ತಿಳಿದುಬರುತ್ತದೆ ದೇಶದ ವ್ಯಾಪಾರ ಸುಭದ್ರವಾಗಿದ್ದುದನ್ನು ಇದು ಸೂಚಿಸುತ್ತದೆ[1] ಪ್ರಕೃತ ಶಾಸನವು ಕನ್ನಡನಾಡಿನಲ್ಲಿ ದೊರೆತ ಅಂಥದೊಂದು

ಇಮ್ಮಡಿ ರಾಜೇಂದ್ರನ ಶಾಸನವೊಂದು ಹಳೇ ಆಲೂರಿನಲ್ಲಿದೆ (ಚಾ ನ ೧೪೬) ಈ ರಾಜನಿಗೆ ಪರಕೇಸರಿ ಎಂಬ ಬಿರುದಿತ್ತು ಆದರೆ ಈ ಶಾಸನದಲ್ಲಿ ಅವನನ್ನು ರಾಜಕೇಸರಿ ಎಂದು ಕರೆದಿದೆ ಇದು ತಪ್ಪಿರಬೇಕು ಭದ್ರಳ್ಳಿಯ ಕುಲೋತ್ತುಂಗನ ಶಾಸನ (ಕೊ ಗಾ ೭೩)ದಲ್ಲಿಯೂ ಇಂಥದೇ ತಪ್ಪು ಆಗಿದ್ದು, ಕುಲೋತ್ತುಂಗನ ರಾಜಕೇಸರಿ ಎಂಬ ಬಿರುದಿಗೆ ಬದಲಾಗಿ ಪರಕೇಸರಿ ಎಂದಿದೆ ಇಮ್ಮಡಿ ರಾಜೇಂದ್ರನ ಈ ಶಾಸನವು ೨೦ ಅಂತಿಯಕಾಬರಣಮಾಡಗಳಿಗೆ ಭೂಮಿಯೊಂದನ್ನು ಮಾರಿದುದನ್ನು ತಿಳಿಸುತ್ತದೆ ಈ ನಾಣ್ಯವನ್ನು ಹಾಕಿಸಿದ ದೊರೆ ಯಾರೆಂಬುದು ತಿಳಿಯದು

ಮೇಲೆ ತಿಳಿಸಿದ ಭದ್ರಳ್ಳಿ ಶಾಸನದಲ್ಲಿ ಮುಡಿಗೊಂಡಶೋಳಮಂಡಲದೊಳಗಿದ್ದ ವೀರರಾಜೇಂದ್ರಶೋಳವಳನಾಡಿನ ಹೆಸರಿದೆ ಈ ವಳನಾಡನ್ನು ಒಂದನೇ ಕುಲೋತ್ತುಂಗನಿಗೆ ಮುಂಚೆ ಇದ್ದ ವೀರರಾಜೇಂದ್ರನ ಆಳ್ವಿಕೆಯಲ್ಲಿ ರಚಿಸಿರಬೇಕು ಚಾ ನ ೩೦೩ನೇ ಶಾಸನದಲ್ಲಿ ಮಡಪರಿಯಾಬಿ, ಪುಲುವರಿ, ವೆಟ್ಟಿವರಿ, ಮಂಗುವಣಿ ಮೊದಲಾದ ಹಲವು ತೆರಿಗೆಗಳನ್ನು ಹೇಳಿದೆ ಪುಲುವರಿಯು ಪುಲ್ವರಿಯಾಗಿದ್ದು ಬಹುಶಃ ಗೋಮಾಳದ ತೆರಿಗೆಯನ್ನೂ, ವೆಟ್ಟಿಯಿಂದ ಹುಟ್ಟಿರಬಹುದಾದ ವೆಟ್ಟಿವರಿಯು ಕನ್ನಡ ಶಾಸನಗಳಲ್ಲಿ ಬರುವ ವಿಟ್ಟಿ ಅಥವಾ ಬಿಟ್ಟಿಯ ಮೇಲಿನ ತೆರಿಗೆಯನ್ನೂ ಸೂಚಿಸಬಹುದು ಬಹುಶಃ ಬಿಟ್ಟಿಯ ಕೆಲಸಕ್ಕೆ ಬಾರದವರ ಮೇಲೆ ಈ ತೆರಿಗೆಯನ್ನು ವಿಧಿಸುತ್ತಿದ್ದಿರಬಹುದು

ಪದ್ಯರೂಪದಲ್ಲಿ ಸಂಸ್ಕೃತದಲ್ಲಿರುವ ಒಂದನೇ ಕುಲೋತ್ತುಂಗನ ಅಪರೂಪದ ಪ್ರಶಸ್ತಿಯನ್ನು ಯಳಂ ೯೭ರಲ್ಲಿ ನೋಡಬಹುದು ಆಗರದ ಶಾಸನವೊಂದು (ಯಳಂ ೯೮) ಮಾಜಗುರುಗಳ ಕೋರಿಕೆಯ ಮೇಲೆ ರಾಜನು ರಾಜೇಂದ್ರಚೋಳಚತುರ್ವೇದಿಮಂಗಲವೆಂಬ ಮತ್ತೊಂದು ಹೆಸರಿದ್ದ ಒಂದು ಊರಿನ (ಅದರ ಹೆಸರು ಹೋಗಿದೆ) ಜೊತೆಗೆ ಬೇರೆ

[1] K A N Sastry *The Cōlas* (2nd edition) p 596-97

ಕ್ರಿ ಶ ೯೯೭–೯೮ರ ಕುಡಕೂರ ಶಾಸನ (ಪಿ ಸ ೯೨) ಚಾಲುಕ್ಯ ಪೆರ್ಮಾನಡಿಯ ಮಗಳಾದ ಪಂಪಾದೇವಿಯ ಆಳ್ವಿಕೆಯನ್ನು ಉಲ್ಲೇಖಿಸುತ್ತದೆ "ಫ್ಲೀಟ್ ಆಕೆಯನ್ನು ಸತ್ಯಾಶ್ರಯನ ಮಗಳೆಂದು ಗುರುತಿಸಿರುವುದು ಸರಿಯಾಗಿಲ್ಲ ದಿದ್ದಲ್ಲಿ ಆಕೆ ಗಂಗರಸನೊಬ್ಬನ ಪತ್ನಿಯಾಗಿದ್ದು, ಈ ಕಾಲಕ್ಕೆ ವಿಧವೆಯಾಗಿದ್ದಳು" ಎಂದು ರೈಸ್ ಅಭಿಪ್ರಾಯಪಡು ತ್ತಾರೆ[1] ಬಿದರಗಡ್ಡಿ ಶಾಸನವು[2] ಕುಂದರಾಜನ ಪತ್ನಿಯಾದ ಪಂಪಾದೇವಿಯು ಜಿಡುಗೂರು ಗ್ರಾಮವನ್ನು ಆಳುತ್ತಿದ್ದುದನ್ನು ಉಲ್ಲೇಖಿಸುತ್ತದೆ ಈ ಶಾಸನದ ಕಾಲ ತಿಳಿದಿಲ್ಲವಾದರೂ ಕ್ರಿ ಶ ೧೦೧೫ರಲ್ಲಿ ಪಟ್ಟಕ್ಕೆ ಬಂದ ಇಮ್ಮಡಿ ಜಯಸಿಂಹನ ಆಳ್ವಿಕೆಯ ಕಾಲಕ್ಕೆ ಸೇರುತ್ತದೆ ಕುಡಕೂರು ಮತ್ತು ಬಿದರಗಡ್ಡಿ ಶಾಸನಗಳಲ್ಲಿ ಕಂಡುಬರುವ ಇಬ್ಬರು ವ್ಯಕ್ತಿಗಳೂ ಒಬ್ಬರೇ ಆಗಿರುವ ಸಾಧ್ಯತೆ ಉಂಟು[3] ರೈಸ್‌ರವರು ಸಂದೇಹಿಸಿರುವಂತೆ ಈಕೆ ಪ್ರಾಪ್ತವಯಸ್ಕಳಾಗಿರದ ಕಾರಣ ಕ್ರಿ ಶ ೯೯೭ರವರೆಗೂ ಮದುವೆಯಾಗಿರದೆ ಅನಂತರ ಕುಂದಮರಸನನ್ನು ಮದುವೆಯಾಗಿರುವ ಸಾಧ್ಯತೆ ಉಂಟು ಇದನ್ನು ಒಪ್ಪಿಕೊಂಡಲ್ಲಿ ಸತ್ಯಾಶ್ರಯನ ಅಳಿಯನಾದ ಕುಂದಮರಸನನ್ನು ಅವನ 'ಪುತ್ರ' ಎಂದು ಕರೆದಿರುವುದಕ್ಕೆ ಕಾರಣ ದೊರೆತಂತಾದುತ್ತದೆ

## ಚೋಳರು

ಚೋಳರ ಸುಮಾರು ಹನ್ನೆರಡು ಶಾಸನಗಳು ಈ ಸಂಪುಟದಲ್ಲಿವೆ ಇನ್ನೂ ಕೆಲವು ಚೋಳಶಾಸನಗಳಾಗಿರುವ ಸಾಧ್ಯತೆ ಇದೆ ಆದರೆ ಅವು ತ್ರುಟಿತವಾಗಿರುವುದರಿಂದ ಅವುಗಳ ಬಗ್ಗೆ ಖಚಿತವಾಗಿ ಹೇಳಲು ಸಾಧ್ಯವಿಲ್ಲ

ಇವುಗಳಲ್ಲಿ ಪ್ರಾಚೀನತಮ ಶಾಸನವು (ಚಾನ ೧೪೫) ಒಂದನೇ ರಾಜರಾಜನ ಆಳ್ವಿಕೆಯ ಕಾಲದ್ದು ಶಕ ೯೧೩ ಎಂದರೆ ಕ್ರಿ ಶ ೯೯೧ರ ಈ ಶಾಸನ ಚೋಳನಾರಾಯಣನ ವಿಜಯರಾಜ್ಯವನ್ನು ಉಲ್ಲೇಖಿಸುವುದರಿಂದ ಈ ವರ್ಷದಲ್ಲಿ ಆಳುತ್ತಿದ್ದ ಚೋಳರಸನಾದ ಒಂದನೇ ರಾಜರಾಜನೇ ಈ ಚೋಳನಾರಾಯಣನೆಂದು ಗುರುತಿಸಲಾಗಿದೆ[4] ಅವನ ಆಳ್ವಿಕೆಯ ೬ನೆಯ ವರ್ಷದಲ್ಲಿ ಎಂದರೆ ಕ್ರಿ ಶ ೯೯೧ರಲ್ಲೇ ಮೈಸೂರು ಜಿಲ್ಲೆಯ ಒಳಭಾಗದಲ್ಲಿ ಈ ಶಾಸನ ಕಂಡುಬರುವು ದರಿಂದ ಆ ಕಾಲಕ್ಕಾಗಲೇ ರಾಜರಾಜನು ಈ ಭಾಗಗಳನ್ನು ಆಕ್ರಮಿಸಿಕೊಂಡಿದ್ದನೆಂಬುದನ್ನು ಸೂಚಿಸುತ್ತದೆ ನೊಳಂಬ ಹಾಗೂ ಗಂಗರ ಮೇಲಿನ ಅವನ ದಿಗ್ವಿಜಯಗಳನ್ನು ಉಲ್ಲೇಖಿಸುವ ಶಾಸನಗಳು ಅವನ ಆಳ್ವಿಕೆಯ ೮ನೆಯ ಮತ್ತು ೯ನೆಯ ವರ್ಷಗಳಿಗೆ ಸೇರಿದವು ಬಹುಮಟ್ಟಿಗೆ ಆ ಹೊತ್ತಿಗೆ ಅವನ ದಿಗ್ವಿಜಯಗಳು ಮುಕ್ತಾಯ ಘಟ್ಟವನ್ನು ತಲುಪಿದ್ದವು ಈ ಕನ್ನಡ ಶಾಸನ ಸೋಮರಾಸಿ ಭಟ್ಟಾರಕನಿಗೆ ವಿದ್ಯಾದಾನವಾಗಿ ಭೂಮಿಯನ್ನು ದತ್ತಿಬಿಟ್ಟುದನ್ನು ನಿರೂಪಿಸುತ್ತದೆ ಶಾಸನದ ಕಾಲನಿರೂಪಣೆ ಮತ್ತು ಅದರ ಕನ್ನಡ ಭಾಷೆ ಚೋಳರು ಈ ಭಾಗಗಳಲ್ಲಿ ತಮ್ಮ ರಾಜ್ಯದ ಆಡಳಿತವ್ಯವಸ್ಥೆಯನ್ನು ಇನ್ನೂ ಜಾರಿಗೆ ತಂದಿರಲಿಲ್ಲವೆಂಬುದನ್ನು ಬಹುಶಃ ಸೂಚಿಸುತ್ತವೆ ಹೊಂಗನೂರಿನಲ್ಲಿ ದೊರೆತಿರುವ ಹೊಸಶಾಸನ (ಚಾ ನ ೧೬೭) ಕನ್ನಡ ಲಿಪಿಯಲ್ಲಿದ್ದರೂ ತಮಿಳು ಭಾಷೆಯಲ್ಲಿದೆ ಈ ಶಾಸನ ತಿರುಮಗಳ್ಪೋಲ ಎಂದು ಆರಂಭವಾಗುವ ಅರಸನ ಬಿರುದಾವಳಿಯ ಕೆಲಭಾಗಗಳನ್ನೊಳಗೊಂಡಿದೆ ಅವನ ಆಳ್ವಿಕೆಯ ಎಂಟನೆಯ ಹಾಗೂ ಅನಂತರದ ವರ್ಷಗಳ ಶಾಸನಗಳಲ್ಲಿ ಈ ಪ್ರಶಸ್ತಿ ದೊರೆಯುತ್ತದೆ ಕಾಂದಲೂರು, ವೇಂಗಿನಾಡು, ಗಂಗವಾಡಿ, ನೊಳಂಬವಾಡಿ, ದಡಿಗವಟ್‌ (ತಡಿಗೈಪಾಡಿ), ಇತ್ಯಾದಿಗಳ ಮೇಲಿನ ಅವನ ವಿಜಯವನ್ನು ಈ ಶಾಸನ ಉಲ್ಲೇಖಿಸುವುದರಿಂದ ಇದು ಚಾ ನ ೧೪೫ಕ್ಕಿಂತ ಕೆಲವು ವರ್ಷಗಳ ಈಚಿನದಾಗಿದ್ದು ಆ ಕಾಲಕ್ಕೆ ಈ ಭಾಗಗಳೆಲ್ಲ ಅವನ ಅಧೀನಕ್ಕೆ ಒಳಪಟ್ಟಿದ್ದವೆಂಬುದನ್ನು ಇದು ಸೂಚಿಸುತ್ತದ

ಈ ಸಂಪುಟದಲ್ಲಿ ರಾಜೇಂದ್ರಚೋಳನ ಎರಡು ಶಾಸನಗಳಿವೆ ಕ್ರಿ ಶ ೧೦೧೬ಕ್ಕೆ ಸೇರುವ ಚಾನ ೪೦೯ ಇವುಗಳ ಲ್ಲೊಂದು ತುಲುಗಾಳಗವನ್ನು ಉಲ್ಲೇಖಿಸುವ ಈ ಶಾಸನದ ಬಹುಭಾಗ ಸವೆದಿದೆ ಹು ೪ ರಾಜೇಂದ್ರಚೋಳನ ೯ನೇ ಆಡಳಿತವರ್ಷಕ್ಕೆ ಸೇರಿದುದು ಶಾಸನದ ಲಿಪಿ ಹನ್ನೊಂದನೆಯ ಶತಮಾನದ್ದಾದ್ದರಿಂದ ಈ ಶಾಸನವನ್ನು ಒಂದನೇ ರಾಜೇಂದ್ರನ

---

[1] ಎ ಕ IV (ರೈಸ್ ಅವರ ಆವೃತ್ತಿ) ಪೀಠಿಕೆ ಪು 13

[2] ARSIE 1932–33 Bk No 9

[3] QJMS Vol xlix p 252–256

[4] ಎಂ ಎ ಆರ್ ೧೯೦೭ ಪು ೯೨

ಕಾಲಕ್ಕೆ ಸೇರಿಸಿದೆ ಆದ್ದರಿಂದ ಇವರ ಕಾಲ ಕ್ರಿ ಶ ೧೦೨೦-೨೧ ಆಗಬಹುದು ರಾಜೇಂದ್ರಚೋಳಸೆಟ್ಟಿಯು ಕಾಳಗವೊಂದರಲ್ಲಿ ಸತ್ತುದನ್ನೂ ಆತನ ಸಾವಿಗೆ ಪ್ರತೀಕಾರವಾಗಿ ಅದಕ್ಕೆ ಕಾರಣನಾದವನನ್ನು ಕೊಂದ ವಿಷಯವನ್ನೂ ಈ ಶಾಸನ ಸೂಚಿಸುತ್ತದೆ ಇಲ್ಲಿ ಕಂಡುಬರುವ ರಾಜೇಂದ್ರಚೋಳನಾಟ್ಟರೆಯೂ ಅದೇ ಸ್ಥಳದ ಇನ್ನೊಂದು ಶಾಸನ(ಹು ೫)ದಲ್ಲಿ ಬರುವ ಇದೇ ಹೆಸರಿನ ವ್ಯಕ್ತಿಯೂ ಒಬ್ಬನೇ ಇರಬೇಕು ರಾಜೇಂದ್ರಚೋಳನೆಟ್ಟಿಯ ಹೆಸರೂ ಈ ಇನ್ನೊಂದು ಶಾಸನದಲ್ಲಿಯೂ ಇವೆ ಆದ್ದರಿಂದ ಈ ಶಾಸನವನ್ನೂ ಇದೇ ಚೋಳರಾಜನ ಕಾಲಕ್ಕೆ ಸೇರಿಸಬಹುದು

ಶಾಗ್ಯಂನಲ್ಲಿರುವ ಕೊ ಗಾ ೬೫ ಒಂದನೇ ರಾಜಾಧಿರಾಜನ ಶಾಸನದ ತುಂಡು ಇದರ ಕಾಲ ೧೦೪೬-೪೭ ಗಂಗೈಕೊಂಡ ಶೋಟವಳನಾಡು ಮುಡಿಗೊಂಡಶೋಟವುಂಡಲದ ಒಂದು ಭಾಗವಾಗಿತ್ತೆಂದೂ ಕುಂದುನಾಡು ಅದರ ಒಂದು ಉಪಭಾಗವಾಗಿತ್ತೆಂದೂ ಈ ಶಾಸನದಿಂದ ತಿಳಿಯಬಹುದು ಈ ಸಂಪುಟದಲ್ಲಿನ ಬೇರೆ ಶಾಸನಗಳಿಂದ ಪದಿನಾಡು (ಚಾ ನ ೧೪೬, ೧೪೭) ಮತ್ತು ಎಣ್ಣೈನಾಡು (ಚಾ ನ ೩೦೩)ಗಳೂ ಇದೇ ವಳನಾಡಿನ ಭಾಗಗಳಾಗಿದ್ದವೆಂದು ನಮಗೆ ತಿಳಿದು ಬರುತ್ತದೆ

ಮಂಗಲದಲ್ಲಿ ದೊರೆತ ಹೊಸ ಶಾಸನವು (ಚಾ ನ ೧೩೨) ಈ ರಾಜನಿಗೆ ಸೇರಿದ್ದು ೧೦೪೮-೫೦ರ ಈ ಶಾಸನದಲ್ಲಿ ತಿಂಗಳೇರ್ತ್ತ್‌ಟು ಎಂದು ಆರಂಭವಾಗುವ ಅವನ ಪ್ರಶಸ್ತಿಯಿದೆ ಚಾ ನ ೧೩೫ರಲ್ಲಿಯೂ ಇದೇ ಪ್ರಶಸ್ತಿಯಿದೆ ಆದರೆ ವಿವರಗಳು ಸವೆದುಹೋಗಿವೆ ಅಯ್ಯಾವೊಳಿಲ್ (ಅಯ್ಯಾವೊಳೆ)ನ ತಿಶೈಆಯಿರತ್ತೈನೂರ್ವರ ವಣಿಕ್ ಸಂಘವು ರಾಜಾಧಿರಾಜಚತುರ್ವೇದಿಮಂಗಲವೆಂಬ ಹೆಸರಿದ್ದ ಮೇಲೂರನ್ನು ಎಱಿವೀರಪಟ್ಟಣವನ್ನಾಗಿ ಮಾರ್ಪಡಿಸಿದ ಕುತೂಹಲಕರವಾದ ಸಂಗತಿಯನ್ನು ಚಾ ನ ೧೪೬ ತಿಳಿಸುತ್ತದೆ ಊರಿಂದೂರಿಗೆ ಸಂಚರಿಸುವ ವಣಿಕಸಮೂಹಗಳಿಗೆ ಇಲ್ಲಿ ಒದಗಿಸಬೇಕಾದ ಸಾಮಾನು ಸರಂಜಾಮುಗಳ ವಿವರವನ್ನು ಈ ಶಾಸನ ಕೊಡುತ್ತದೆ, ಇಂಥ ವ್ಯಾಪಾರಿಗಳಲ್ಲಿ ಮೇಲಂತಸ್ತು ಕೆಳ ಅಂತಸ್ತುಗಳನ್ನು ಗುರುತಿಸಿ ವಾಳ್ವೀರರಿಗೂ ಇವರಿಗೂ ಆಯಾ ಅಂತಸ್ತಿಗೆ ತಕ್ಕಂತೆ ಬಟ್ಟೆ ಹಂಚಬೇಕಾದುದನ್ನೂ ತಿಳಿಸಿದೆ, ವಣಿಕೈಮಕ್ಕಳಿಗೆ ಎಂದರೆ ವ್ಯಾಪಾರಿಗಳ ಅಂಗರಕ್ಷಕರಿಗೆ ಇಲ್ಲಿ ತಂಗಿದ್ದಾಗ ಊಟ ಹಾಕುವುದು, ಸತ್ತ ವೀರರ ನೆನಪಿಗಾಗಿ ಹಾಕುವ ಊಟಕ್ಕಾಗಿ ಹಂದಿಯೊಂದನ್ನು ಕೊಲ್ಲುವುದು ಮುಂತಾದ ವಿವರಗಳನ್ನೂ ಇದು ಒಳಗೊಂಡಿದೆ. ಹೀಗೆ ಊರುಗಳನ್ನು ಎಱಿವೀರಪಟ್ಟಣಗಳನ್ನಾಗಿ ಪರಿವರ್ತಿಸುವ ಪದ್ಧತಿ ಇದ್ದುದು ತಮಿಳುನಾಡಿನ ಚೋಳಶಾಸನಗಳಿಂದ ತಿಳಿದುಬರುತ್ತದೆ ದೇಶದ ವ್ಯಾಪಾರ ಸುಭದ್ರವಾಗಿದ್ದುದನ್ನು ಇದು ಸೂಚಿಸುತ್ತದೆ[1] ಪ್ರಕೃತ ಶಾಸನವು ಕನ್ನಡನಾಡಿನಲ್ಲಿ ದೊರೆತ ಅಂಥದೊಂದು

ಇಮ್ಮಡಿ ರಾಜೇಂದ್ರನ ಶಾಸನವೊಂದು ಹಳೇ ಆಲೂರಿನಲ್ಲಿದೆ (ಚಾ ನ ೧೪೬) ಈ ರಾಜನಿಗೆ ಪರಕೇಸರಿ ಎಂಬ ಬಿರುದಿತ್ತು ಆದರೆ ಈ ಶಾಸನದಲ್ಲಿ ಅವನನ್ನು ರಾಜಕೇಸರಿ ಎಂದು ಕರೆದಿದೆ ಇದು ತಪ್ಪಿರಬೇಕು ಭದ್ರಳ್ಳಿಯ ಕುಲೋತ್ತುಂಗನ ಶಾಸನ (ಕೊ ಗಾ ೭೩)ದಲ್ಲಿಯೂ ಇಂಥದೇ ತಪ್ಪು ಆಗಿದ್ದು, ಕುಲೋತ್ತುಂಗನ ರಾಜಕೇಸರಿ ಎಂಬ ಬಿರುದಿಗೆ ಬದಲಾಗಿ ಪರಕೇಸರಿ ಎಂದಿದೆ ಇಮ್ಮಡಿ ರಾಜೇಂದ್ರನ ಈ ಶಾಸನವು ೨೦ ಅಂತಿಯಕಾಬರಣಮಾಡಗಳಿಗೆ ಭೂಮಿಯೊಂದನ್ನು ಮಾರಿದುದನ್ನು ತಿಳಿಸುತ್ತದೆ ಈ ನಾಣ್ಯವನ್ನು ಹಾಕಿಸಿದ ದೊರೆ ಯಾರೆಂಬುದು ತಿಳಿಯದು

ಮೇಲೆ ತಿಳಿಸಿದ ಭದ್ರಳ್ಳಿ ಶಾಸನದಲ್ಲಿ ಮುಡಿಗೊಂಡಶೋಟಮಂಡಲದೊಳಗಿದ್ದ ವೀರರಾಜೇಂದ್ರಶೋಟವಳನಾಡಿನ ಹೆಸರಿದೆ ಈ ವಳನಾಡನ್ನು ಒಂದನೇ ಕುಲೋತ್ತುಂಗನಿಗೆ ಮುಂಚೆ ಇದ್ದ ವೀರರಾಜೇಂದ್ರನ ಆಳ್ವಿಕೆಯಲ್ಲಿ ರಚಿಸಿರಬೇಕು ಚಾ ನ ೩೦೩ನೇ ಶಾಸನದಲ್ಲಿ ಮಡಪರಿಯಾಟಿ, ಪುಲುವರಿ, ವೆಟ್ಟುವರಿ, ವಂಗುವಟ್ಟ ಮೊದಲಾದ ಹಲವು ತೆರಿಗೆಗಳನ್ನು ಹೇಳಿದೆ ಪುಲುವರಿಯು ಪುಲ್ವರಿಯಾಗಿದ್ದು ಬಹುಶಃ ಗೋಮಾಳದ ತೆರಿಗೆಯನ್ನೂ, ವೆಟ್ಟಿಯಿಂದ ಹುಟ್ಟಿರಬಹುದಾದ ವೆಟ್ಟುವರಿಯು ಕನ್ನಡ ಶಾಸನಗಳಲ್ಲಿ ಬರುವ ವಿಟ್ಟಿ ಅಥವಾ ಬಿಟ್ಟಿಯ ಮೇಲಿನ ತೆರಿಗೆಯನ್ನೂ ಸೂಚಿಸಬಹುದು ಬಹುಶಃ ಬಿಟ್ಟಿಯ ಕೆಲಸಕ್ಕೆ ಬಾರದವರ ಮೇಲೆ ಈ ತೆರಿಗೆಯನ್ನು ವಿಧಿಸುತ್ತಿದ್ದಿರಬಹುದು

ಪದ್ಯರೂಪದಲ್ಲಿ ಸಂಸ್ಕೃತದಲ್ಲಿರುವ ಒಂದನೇ ಕುಲೋತ್ತುಂಗನ ಅಪರೂಪದ ಪ್ರಶಸ್ತಿಯನ್ನು ಯಳಂ ೯೭ರಲ್ಲಿ ನೋಡಬಹುದು ಅಗರದ ಶಾಸನವೊಂದು (ಯಳಂ ೯೮) ಮಾಜಗುರುಗಳ ಕೋರಿಕೆಯ ಮೇಲೆ ರಾಜನು ರಾಜೇಂದ್ರಚೋಳಚತುರ್ವೇದಿಮಂಗಲವೆಂಬ ಮತ್ತೊಂದು ಹೆಸರಿದ್ದ ಒಂದು ಊರಿನ (ಅದರ ಹೆಸರು ಹೋಗಿದೆ) ಜೊತೆಗೆ ಬೇರೆ

[1] K A N Sastry *The Cōlas* (2nd edition) p 596-97

ಮೂರು ಊರುಗಳಲ್ಲಿರುವ ಭೂಮಿಯನ್ನೂ ಸೇರಿಸಿ ವಿರುದರಾಜಭಯಂಕರಚತುರ್ವೇದಿಮಂಗಲವೆಂಬ ಅಗ್ರಹಾರವನ್ನು ಮಾಡಿ ಕಾಂಚೀಪುರದ ತಿರುವೆಗಂಬಮುಡೈಯಾರ್ ದೇವಾಲಯದಲ್ಲ ನಡೆದ ಪುಷ್ಪಾಭಿಷೇಕ ಸಮಯದಲ್ಲಿ ೧೦೮ ಭಟ್ಟರಿಗೆ ದತ್ತಿ ಬಿಟ್ಟುದನ್ನು ತಿಳಿಸುತ್ತದೆ ಹೀಗೆ ದತ್ತಿ ಬಿಟ್ಟುದು ರಾಜನ ೧೨ನೆಯ ಆಳ್ವಿಕೆಯ ವರ್ಷದಲ್ಲಿ ಎಂದರೆ ಕ್ರಿ ಶ ೧೦೮೨-೮೩ರಲ್ಲಿ ಇದೇ ಶಾಸನದಲ್ಲಿ ರಾಜನ ೩೪ನೆಯ ಆಳ್ವಿಕೆಯ ವರ್ಷ ಎಂದರೆ ಕ್ರಿ ಶ ಸು ೧೧೦೪-೦೫ರಲ್ಲಿ ಹಿಂದೆ ಕೊಟ್ಟಿದ್ದ ದತ್ತಿಗಳನ್ನು ಪುನರ್ದತ್ತಿ ಹಾಕಿಸಿರುದನ್ನೂ ತಿಳಿಸಿದೆ ಹೀಗೆ ಶಾಸನಗಳಲ್ಲಿ ದುರ್ಗೈಯಾರಗರ ಎಂದು ಕರೆದಿರುವ ಇಂದಿನ ಅಗರ ಗ್ರಾಮವು ೧೦೮೨-೮೩ರಲ್ಲಿ ಅಸ್ತಿತ್ವಕ್ಕೆ ಬಂದಿತು ಇದೇ ಸ್ಥಳದಲ್ಲಿರುವ ಯಳಂ ೧೮೩ರಲ್ಲಿಯೂ ಈ ವಿಷಯವನ್ನು ಎತ್ತಿ ಹೇಳಿದೆ ಕುಲೋತ್ತುಂಗನು ೧೦೮ ಜನ ಬ್ರಾಹ್ಮಣರಿಗೆ ಈ ಊರನ್ನು ದತ್ತಿಬಿಟ್ಟ ೧೨೦ ವರ್ಷಗಳ ನಂತರ ಆ ದತ್ತಿಯನ್ನು ಪುನರ್ನವೀಕರಿಸಿದುದಾಗಿ ಶಾಸನದಲ್ಲಿದ ಇಲ್ಲಿ ಹೇಳಿರುವುದು ೧೦೮೩ರಲ್ಲಿ ಕೊಟ್ಟ ದಾನವೇ ಆಗಿರಬೇಕು ಇದು ನಿಜವಾದಲ್ಲಿ ಯಳಂ ೧೮೩ರ ಕಾಲ ಅದಕ್ಕಿಂತ ೧೨೦ ವರ್ಷ ಈಚಿನದು ಎಂದರೆ ೧೨೦೩ ಆಗಿರಬಹುದು ಆದರೆ ಶಾಸನದಲ್ಲಿ ತಿಳಿಸಿರುವ ಕ್ರೋಧಿಸಂವತ್ಸರ ಇದಕ್ಕೆ ಹೊಂದುವುದಿಲ್ಲ

## ಹೊಯ್ಸಳರು

ವಿಷ್ಣುವರ್ಧನನಿಂದಾರಂಭಿಸಿ, ರಾಮನಾಥನನ್ನುಳಿದು, ಎಲ್ಲ ಹೊಯ್ಸಳರಾಜರ ಶಾಸನಗಳೂ ಈ ಸಂಪುಟದಲ್ಲಿದ್ದು ಅವುಗಳ ಸಂಖ್ಯೆ ನೂರಕ್ಕೂ ಮೀರಿದೆ ಮರದೂರಿನಲ್ಲಿ ಹೊಸದಾಗಿ ದೊರೆತ ಶಾಸನ (ಹು ೧೫) ದೋರಸಮುದ್ರದಿಂದ ಆಳುತ್ತಿದ್ದ ಜಗದೇಕಮಲ್ಲ ಹೊಯ್ಸಳನ ಕಾಲದ್ದು ಇಲ್ಲಿ ಬರುವ ರಾಜನ ಬಿರುದಾವಳಿಗಳು ಕಾರ್ಯದ ಶಾಸನದಲ್ಲಿರುವ[1] ವಿಷ್ಣುವರ್ಧನನ ಬಿರುದಾವಳಿಗಳನ್ನೂ ಇದೇ ಸಂಪುಟದಲ್ಲಿ ಬರುವ ಒಂದನೇ ನರಸಿಂಹನ ಬಿರುದಾವಳಿಗಳನ್ನೂ (ಚಾ ನ ೧೨೨, ಹು ೧೨, ಕೊ ಗಾ ೪೧) ಹೋಲುತ್ತವೆ ಕಾರ್ಯದ ಶಾಸನದಲ್ಲಿ ಉಕ್ತನಾಗಿರುವ ರಾಜನನ್ನು ವಿಷ್ಣುವರ್ಧನನೆಂದು ಗುರುತಿಸಲಾಗಿದ್ದು ಆರನೆಯ ವಿಕ್ರಮಾದಿತ್ಯನ ಮೊಮ್ಮಗನಾದ ಇಮ್ಮಡಿ ಚಾಲುಕ್ಯಜಗದೇಕಮಲ್ಲನು ವಿಷ್ಣುವರ್ಧನನನ್ನು ಪರಾಜಯಗೊಳಿಸುವಲ್ಲಿ ಪಾಲ್ಗೊಂಡಿದ್ದಿರಬೇಕೆಂದೂ ಆದರಿಂದಲೇ ಹೊಯ್ಸಳರು 'ಜಗದೇಕಮಲ್ಲ' ಎಂಬ ಬಿರುದನ್ನು ಹೊಂದಿದರೆಂದೂ ಹೇಳಿದೆ ಶಾಸನಕಾಲ ಕ್ರಿ ಶ ೧೧೨೪ ಆದುದರಿಂದ ಕ್ರಿ ಶ ಸು ೧೧೨೨ರಲ್ಲಿ ಸಂಭವಿಸಿದ ಯುದ್ಧದಲ್ಲಿ ಹೊಯ್ಸಳರು ಜಗದೇಕಮಲ್ಲನಿಂದ ಪರಾಜಯ ಹೊಂದಿರಬಹುದೆಂದೂ ಸೂಚಿಸಿದೆ

ಈಗ ಪುನರ್ವಿಮರ್ಶೆಗೊಳಗಾಗಿರುವ ಶಾಸನದ ತೇದಿಯ ವಿವರ ಹೀಗಿದೆ ಶಕ ೬೦೦ ವ್ಯಯ, ಚೈತ್ರ ಶು ೧೪, ಗುರುವಾರ ಈ ವಿವರಗಳು ಕ್ರಮವಾಗಿಲ್ಲವೆಂಬುದು ಸ್ಪಷ್ಟವಾಗಿಯೇ ಇದೆ ವ್ಯಯ ಸಂವತ್ಸರವು ವಿಷ್ಣುವರ್ಧನ ಹಾಗೂ ಒಂದನೇ ನರಸಿಂಹನ ಆಳ್ವಿಕೆಯ ಕಾಲಕ್ಕೆ ಎಂದರೆ ಕ್ರಿ ಶ ೧೧೦೬ ಮತ್ತು ೧೧೬೬ಕ್ಕೆ ಹೊಂದಿಕೆಯಾಗುತ್ತದೆ ವಿಷ್ಣುವರ್ಧನನ ಪುತ್ರ ಒಂದನೇ ನರಸಿಂಹನಿಗೂ ಜಗದೇಕಮಲ್ಲನೆಂಬ ಬಿರುದಿದ್ದುದು ಸ್ಪಷ್ಟ ಪ್ರಸ್ತುತ ಸಂಪುಟದಲ್ಲಿಯೇ ಅಂತಹ ಕೆಲವು ಶಾಸನಗಳಿವೆ ಪ್ರಕೃತ ಶಾಸನವನ್ನೂ ಒಂದನೇ ನರಸಿಂಹನ ಕಾಲದ್ದೆಂದು ಸೂಚಿಸಬಹುದು ಆದರೆ ಕೊಟ್ಟಿರುವ ಶಕವರ್ಷ ತಪ್ಪಾಗಿದೆ ಉಳಿದ ತೇದಿ ವಿವರಗಳು ಕ್ರಿ ಶ ೧೧೬೬, ಮಾರ್ಚಿ ೧೭, ಗುರುವಾರಕ್ಕೆ ಸರಿಯಾಗಿ ಹೊಂದಿಕೆಯಾಗುವುದರಿಂದ ಇದನ್ನು ಒಂದನೇ ನರಸಿಂಹನ ಕಾಲದ್ದೆಂದೇ ಹೇಳಬಹುದು

ವಿಷ್ಣುವರ್ಧನನ ಸೇನಾಪತಿಯೂ ಸಂಧಿವಿಗ್ರಹಿಯೂ ಆದ ಪುಣಿಸಮಯ್ಯನ ಚಾಮರಾಜನಗರದ ಶಾಸನವು (ಚಾ ನ ೨) ಆತನ ದಂಡಯಾತ್ರೆಗಳನ್ನೂ ಆತನ ವಂಶಾವಳಿಯನ್ನೂ ತಿಳಿಸುತ್ತದೆ ಮಹಾಮಾತ್ಯಕುಲೋದ್ಭವನಾಗಿದ್ದ ಪುಣಿಸಮಯ್ಯನಿಗೆ ಮಂತ್ರಿಪದವಿಯು ವಂಶಪಾರಂಪರ್ಯವಾಗಿ ಬಂದಿರುವಂತೆ ತೋರುತ್ತದೆ ಇವನ ವಂಶದವರು ಜೈನಮತಾನುಯಾಯಿಗಳಾಗಿದ್ದರು ಇವರಲ್ಲಿ ಮೊದಲಿಗನು ಚಾಮಚಮೂಪ ಆತನ ಮಗ ಪುಣಿಸಮಚಮೂಪ ಆತನಿಗೂ ಮತ್ತು ಆತನ ಪತ್ನಿ ಪೋಚಲೆಗೂ ಚಾಮರಾಜ, ನಾಕಣ (ನಾಗದೇವ) ಮತ್ತು ಕುಮರಯ್ಯರೆಂಬ ಪುತ್ರರು ಜನಿಸಿದರು ಹಿರಿಯನಾದ ಚಾಮರಾಜನಿಗೆ ಅರಸಿಕಬ್ಬೆ ಮತ್ತು ಚೌಂಡಲೆಯರೆಂಬ ಇಬ್ಬರು ಪತ್ನಿಯರು ಅವರಿಗೆ ಕ್ರಮವಾಗಿ ಪ್ರಸ್ತುತ ಶಾಸನದ ದಾನಿಯಾದ ಪುಣಿಸಮಯ್ಯ ಮತ್ತು ಬಿಟ್ಟಿಗರು ಜನಿಸಿದರು ಈ ಎರಡನೇ ಪುಣಿಸಮಯ್ಯನ

[1] ಎ ಕ III (1974) ಸಂ ಗೂ 283

ಮಗನ ಹೆಸರೂ ಬಿಟ್ಟಿಗ[1] ಬಹುಶಃ ಬಿಟ್ಟಿಗನೆಂಬ ಹೆಸರಿದ್ದ ಹೊಯ್ಸಳ ವಿಷ್ಣುವರ್ಧನನಿಗೆ ವಿಧೇಯತೆಯನ್ನು ಸೂಚಿಸಲು ಈ ಹೆಸರನ್ನು ಇಟ್ಟಿರಬಹುದು ಪುಣಿಸಮಯ್ಯ ಎಂಬ ಹೆಸರೇ ಇರುವ ಅವನ ತಾತನನ್ನು 'ಶಾಸನ ವಾಚಕ ಚಕ್ರವರ್ತಿ' ಎಂದು ವರ್ಣಿಸಲಾಗಿದೆ ಇಮ್ಮಡಿ ಪುಣಿಸಚಮೂಪನು ಚಾಮರಾಜನಗರದಲ್ಲಿರುವ ಪಾರ್ಶ್ವನಾಥಬಸದಿಯನ್ನು ಕಟ್ಟಿಸಿದು ದಲ್ಲದೆ ಗಂಗವಾಡಿ–೯೬೦೦೦ದ ಬಸದಿಗಳನ್ನೂ ಊರ್ಜಿತಗೊಳಿಸಿದನೆಂದು ಶಾಸನವು ತಿಳಿಸುತ್ತದೆ ಈತನ ಗುರು ದ್ರವಿಡಾನ್ವಯದ ಅಜಿತ ಮುನಿಪ

ರಾಮಪಟ್ಟಣದಲ್ಲಿ ದೊರೆತ ಹೊಸ ಶಾಸನದಲ್ಲಿ(ಹು ೧೬)ಕಂಡುಬರುವ ಚಟ್ಟರಾಜನೆಂಬ ಇನ್ನೊಬ್ಬ ಹೊಯ್ಸಳ ಸೇನಾಪತಿಯು ಈವರೆಗೆ ಎಲ್ಲಿಯೂ ಕಂಡುಬಂದಂತಿಲ್ಲ ಈತನೂ ಅರುಂಗಳಾನ್ವಯ ಮತ್ತು ದ್ರವಿಳ ಸಂಘದ ಅಜಿತ ಮುನೀಂದ್ರನ ಶಿಷ್ಯ ಈ ಶಾಸನದಲ್ಲಿಯೂ ಮೇಲೆ ತಿಳಿಸಿರುವ ಶಾಸನದಲ್ಲಿಯೂ ಈ ಗುರುಗಳ ಪೀಳಿಗೆಯನ್ನು ಕೊಟ್ಟಿದೆ ಈ ಶಾಸನದ ಆ ಭಾಗವು ತ್ರುಟಿತಗೊಂಡು ಕೆಲವು ವಿವರಗಳು ನಷ್ಟಹೊಂದಿದ್ದರೂ ಇದರಲ್ಲಿನ ಅಜಿತಮುನಿಪ ಮತ್ತು ಇನ್ನೊಂದರ ಅಜಿತಸೇನಭಟ್ಟಾರಕರೂ ಒಂದೇ ವ್ಯಕ್ತಿಯಾಗಿರಬಹುದು ಈ ಸೇನಾಪತಿಯು ಗಂಗವಂಶಕ್ಕೆ ಸೇರಿದವನೆಂದು ಹೇಳಿದೆ (ಗಂಗಾನ್ವಯ ಗಗನದಿನೇಶ) ಮತ್ತು ಆತನ ವಂಶಪರಂಪರೆ ಹೀಗಿದೆ




ಈ ಚಟ್ಟಮನೂ ಸಂಧಿವಿಗ್ರಹಿಯಾಗಿದ್ದ ಈವರ್ಗರು ಸಹೋದರರೂ ಕ್ರಿ ಶ ೧೧೨೪ರಲ್ಲಿ ತೊಜಿನಾಡಿನ ಹೆಜ್ಜಾರ್ದಿಯಲ್ಲಿ ತಮ್ಮ ತಾಯಿ ಕಮ್ಮವ್ವೆಯ ಪರೋಕ್ಷವಿನಯಕ್ಕಾಗಿ ಎರಡು ಬಸದಿಗಳನ್ನು ಕಟ್ಟಿಸಿದರು ಈ ಶಾಸನದ ಕರ್ತೃ ಚಾವಾಚರಿ

ಕ್ರಿ ಶ ೧೧೬೩ ಮತ್ತು ಕ್ರಿ ಶ ೧೧೯೯ರ ಎರಡು ಶಾಸನಗಳು(ಕೊ ಗಾ ೪೧ ಮತ್ತು ಚಾ ನ ೧೨೨)ಒಂದನೆ ನರಸಿಂಹನನ್ನು ಭುಜಬಲಗಂಗ ಜಗದೇಕಮಲ್ಲನಾರಸಿಂಗಹೊಯ್ಸಳದೇವನೆಂದು ನಿರ್ದೇಶಿಸಿವೆ ತಮಿಳಿನಲ್ಲಿರುವ ಮೊದಲನೆಯ ಶಾಸನದಲ್ಲಿ ಜನೇಕ ಮಲ್ಲನೆಂದಿದ್ದು, ಬಹುಶಃ ಅದು ಜಗದೇಕಮಲ್ಲ ಎಂಬುದರ ತಪ್ಪು ರೂಪವಾಗಿರಬಹುದು ಇದು ಮುಡಿಗೊಂಡ ಶೋಟ ಮಂಡಲದ ಗಂಗೈಕೊಂಡಶೋಟವಳನಾಡಿಗೆ ಸೇರಿದ ತೇನ್ ಕುಂದುನಾಡಿನ ನಾಟ್ಟುಗಾವುಂಡ ಗಂಗಾಧಿರಾಜನ್ ಕುಂದು ನಾಡಾಳ್ವನು ಹೊಸ ವಸಾಹತೊಂದನ್ನು ಸ್ಥಾಪಿಸಿದುದಕ್ಕಾಗಿ ನೀಡಿದ ಶಾಸನ ಇದರ ವಿವರಗಳು ಸ್ಪಷ್ಟವಾಗಿಲ್ಲದಿದ್ದರೂ ಅದು ಈ ವಸಾಹತಿಗೆ ವಲಸೆ ಬಂದವರಿಗೂ ಮತ್ತು ಪುನಃ ವಲಸೆ ಹೋಗಲು ಇಚ್ಛಿಸುವವರಿಗೂ ಕೆಲವು ಗೊತ್ತಾದ ನಿಯಮ ನಿರ್ಬಂಧಗಳನ್ನು ಹಾಕಿರುವುದು ಕಂಡುಬರುತ್ತದೆ

ಚಾ ನ ೨೨೨ ಮಯಮಲ್ಲಿದೇವ, ತಿಬ್ಬಾಂಡಿಮಾರಾಯ, ದಂಡನಾಯಕ ಬಿಟ್ಟಿಯಣ್ಣ ಮತ್ತು ಇತರರು ಹಟ್ಟಲೂರಿನ ಕೇಶವದೇವರಿಗೆ ದತ್ತಿ ಬಿಟ್ಟುದಕ್ಕಾಗಿ ಹಾಕಿಸಿರುವ ಶಾಸನ ಈ ದೇವಾಲಯವನ್ನು ವಿಷ್ಣುಗೃಹವೆಂದು ವರ್ಣಿಸಲಾಗಿದೆ ದತ್ತಿಬಿಟ್ಟ ಸ್ಥಳವಾದ ಹಟ್ಟಲಕ್ಕೆ ಕೇರಳಾಂತಕಚತುರ್ವೇದಿಮಂಗಲವೆಂಬ ಹೆಸರೂ ಇತ್ತು ಮತ್ತು ಇದೇ ಬಹುಶಃ ಈಗಿನ ಹರಳುಕೋಟೆ

ಹು ೧೨ ಮತ್ತು ಹು ೩೩ನೆಯ ಶಾಸನಗಳು ವಿಷ್ಣುವರ್ಧನ ನಾರಸಿಂಗದೇವನ ಎಂದರೆ ಒಂದನೇ ನರಸಿಂಹನ ಆಳ್ವಿಕೆಗೆ ಸೇರಿದುವು ಆದರೆ ಎರಡು ಶಾಸನಗಳಲ್ಲೂ ತೇದಿ ಸೂಚಿತವಾಗಿಲ್ಲ ಹು ೧೨ ಹೊಸದಾಗಿ ದೊರೆತ ಶಾಸನ.

---

[1] ಶಾಸನದಲ್ಲಿ ೧೪–೦೭ನೇ ಸಾಲುಗಳ ನಡುವಿನ ವೃತ್ತಗಳನ್ನು ಬೇರೆ ರೀತಿಯಲ್ಲೂ ಅರ್ಥೈಸಬಹುದಾದ ಸಾಧ್ಯತೆ ಇದೆ ಅದರಂತೆ ಮೊದಲ ವೃತ್ತದಲ್ಲಿ ಇಬ್ಬರು ಮಕ್ಕಳು ಹುಟ್ಟಿದುದನ್ನು ತಿಳಿಸಿ ಮುಂದಿನ ಪದ್ಯದಲ್ಲಿ ಕೊಳವು ಅಂಭೋಜದ ಉದಯದಿಂದ ಸಂತೋಷಗೊಳ್ಳುವಂತೆ ಅವರ ಜನನದಿಂದ ಮಹಿಮೆಯುಂಟಾಯಿತೆಂದು ತಿಳಿಸುತ್ತದೆ ಹಾಗಾದಲ್ಲಿ ಬಿಟ್ಟಿಗನು ಪುಣಿಸನ ತಮ್ಮನಾಗಿದ್ದು ಬಿಟ್ಟಿಗನೆಂಬ ಮಗನಿದ್ದನೆಂಬುದಕ್ಕೆ ಯಾವ ಆಧಾರವೂ ಇಲ್ಲ ಆದರೆ ಪ್ರಕೃತ ವೃತ್ತವು ಮೇಲೆ ಹೇಳಿದ ಅರ್ಥವನ್ನೇ ಸೂಚಿಸುವಂತೆ ತೋರುತ್ತದೆ

ಹು ೩೩ನೆಯ ಶಾಸನದಲ್ಲಿ ಬಣ್ಣಗವಾಡಿಯನ್ನು ಚಂಗಾಳ್ವರು ಮುತ್ತಿದ ಸಮಯದಲ್ಲಿ ಆ ಗ್ರಾಮದ ಮೂವರು ಗೌಡರು ಸತ್ತ ವಿಷಯವಿದೆ ಆದರೆ ಈ ಮುತ್ತಿಗೆಯ ಬಗ್ಗೆ ಶಾಸನ ಏನನ್ನೂ ಹೇಳದು

ಇಮ್ಮಡಿ ಬಲ್ಲಾಳನ ಆಳ್ವಿಕೆಯ ಕಾಲದ ೧೫ ಶಾಸನಗಳಿದ್ದಾಗ್ಯೂ ಕೇವಲ ೩ ಮಾತ್ರ ಕನ್ನಡದಲ್ಲಿದ್ದು ಉಳಿದುವು ತಮಿಳಿನಲ್ಲಿವೆ ಕುಲಗಾಣದ ಕ್ರಿ ಶ ೧೧೭೩ರ ಚಾ ನ ೩೪೩ನೆಯ ಶಾಸನದಲ್ಲಿ ಕುಲಗಾಣದ ಬಸದಿಗೆ ಇಡ್ಯೆನಾಡಿನ ಎರಡು ಮೂವತ್ತು (ಇರ್ ಮುಪ್ಪದು) ಎಂದರೆ ಅರವತ್ತು ಪ್ರಭುಗಾವುಂಡರು ದತ್ತಿ ಬಿಟ್ಟ ವಿಷಯವಿದೆ ಶಾಸನದ ಈ ದತ್ತಿಯನ್ನು ಪಡೆದವನು ಶ್ರೀಪಾದಿರಾಜದೇವನೆಂದು ಹೇಳಿದೆ ಇದು ವಾದಿರಾಜದೇವ ಎಂಬುದರ ರೂಪಾಂತರವೆಂಬುದು ಸ್ಪಷ್ಟ ಇಲ್ಲಿ ಉಕ್ತವಾಗಿರುವ ಇಡ್ಯೆನಾಡೇ ಪೆರಿಯನಾಡೆಂದು ಹೇಳಲಾಗಿದೆ

ಪಿ ಪ ೧೧೮ ಕಂಪಲಾಪುರದ ಕರಕಂಠೇಶ್ವರ ದೇವಾಲಯದ ಬಳಿಯಿರುವ ವೀರರಗುಡಿಯಲ್ಲಿನ ಎರಡು ಕಲ್ಲುಗಳ ಮೇಲಿದ್ದು ಕುತೂಹಲಕರವಾದ ವೀರಗಲ್ಲು ಶಾಸನವಾಗಿದೆ ಉಯಿಣಬಾಳಿನ ಹತ್ತು ಕುದುರೆಗಳ ನಾಯಕತನ (ಬಾಳಿಕೆ) ವನ್ನು ಪಡೆದ ಕೋಟೆಯಕುಪ್ಪೆಯ ಮಾದೆಯನಾಯಕನು ಕಂದಾಯವನ್ನು ವಸೂಲುಮಾಡುವ ಕೆಲಸಕ್ಕೂ ನೇಮಕಗೊಂಡಿದ್ದನು ಇದಕ್ಕಾಗಿ ಕುಪ್ಪೆನಾಡಿನ ಕೋಟೆಯಕುಪ್ಪೆ ಗ್ರಾಮದ ಹತ್ತು ಕಾಲುವಳಿಗಳನ್ನು ಅವನು ಪಡೆದಿದ್ದನು ಬಿಟ್ಟರಸದಣ್ಣಾಯಕನಿಗೂ ಚಂಗಾಳ್ವ ಮಹಾದೇವನಿಗೂ ನಡೆದ ಯುದ್ಧದಲ್ಲಿ ಚಂಗಾಳ್ವ ಮಹಾದೇವನು ಮೃತಿಹೊಂದಲು ಆ ಸೇಡನ್ನು ತೀರಿಸಲು ಆತನ ಉತ್ತರಾಧಿಕಾರಿಯಾದ ಮಹಾಮಂಡಲೇಶ್ವರ ಪೆಮ್ಮವೀರರಸ ಚಂಗಾಳ್ವನು ಹೊಯ್ಸಳ ಸೇನಾಪತಿಯ ವಶದಲ್ಲಿದ್ದ ಪಾಲ್ಪರೆಯ ಮೇಲೆ ದಾಳಿ ಮಾಡಿದನು ಆಗ ನಡೆದ ಯುದ್ಧದಲ್ಲಿ ಮಾದೆಯ ನಾಯಕನು ಹೊಯ್ಸಳ ಸೇನಾಪತಿಯ ಪರವಾಗಿ ಪರಾಕ್ರಮದಿಂದ ಯುದ್ಧಮಾಡಿ ಮೃತಿಹೊಂದಿದನು ಈ ವೀರನ ಗೌರವಾರ್ಥವಾಗಿ ದಂಡನಾಯಕನು ನೆತ್ತರುಕೊಡಗೆಯಾಗಿ ದತ್ತಿಯನ್ನು ಬಿಟ್ಟನು ವಿಜಯವು ಹೊಯ್ಸಳರದಾಯಿತು ಎಂಬುದು ಸ್ಪಷ್ಟ

ಇದೇ ರಾಜನ ಮುಡಿಗೊಂಡದ ತಮಿಳು ಶಾಸನವು (ಕೊ ಗಾ ೧೧೩) ಕುತೂಹಲಕಾರಿಯಾಗಿದೆ ಇದರಲ್ಲಿ ಸಾಧಾರಣ ಸಂವತ್ಸರವನ್ನು ಮಾತ್ರ ಕೊಟ್ಟಿದೆ ಈ ಸಂವತ್ಸರವು ಮುಮ್ಮಡಿ ಬಲ್ಲಾಳನ ಆಳ್ವಿಕೆಯಲ್ಲಿಯೂ ಬಂದಿತ್ತು ಆದರೆ ಲಿಪಿಯ ಆಧಾರದಿಂದ ಶಾಸನವನ್ನು ಮುಂಚಿನ ಕಾಲಕ್ಕೇ ಸೇರಿಸಬೇಕು ಆದುದರಿಂದ ಈ ಶಾಸನದಲ್ಲಿ ಉಕ್ತನಾಗಿರುವವನು ಇಮ್ಮಡಿ ವೀರಬಲ್ಲಾಳನೆಂದೂ ತೇದಿಯನ್ನು ಕ್ರಿ ಶ ೧೧೯೦–೯೧ ಎಂದೂ ಪರಿಗಣಿಸಲಾಗಿದೆ ಶಾಸನದಲ್ಲಿ ಸೇನಾಪತಿಯ ಮಗನೂ ಮತ್ತು ಮುಡಿಗೊಂಡಶೋಳಪುರದ 'ಅಡ್ಯೆಪ್ಪುಮುದಲಿ'ಯೂ ಆದ ದಾಸಯನಾಯಕನು ವಲಂಗೈ ಸೇನೆಯವರಿಗೆ ಬಿಟ್ಟ ದತ್ತಿಯ ವಿವರವನ್ನು ಕೊಟ್ಟಿದೆ ಈ ಕೊಡಿಗೆ ಭೂಮಿಯನ್ನು ಮೊದಲು 'ವೀರಶೋಳ ಅಣುಕ್ಕರ್' ಎಂಬ ಸಂಘದ ಸದಸ್ಯನೊಬ್ಬನಿಗೆ ಭೋಗ್ಯಕ್ಕೆ ಕೊಟ್ಟಿದ್ದಂತೆ ತಿಳಿದುಬರುತ್ತದೆ ಈ ವೀರಶೋಳಅಣುಕ್ಕರು ವೀರಶೋಳನ ಅಂಗರಕ್ಷಕರಾಗಿದ್ದು ರಾಜನ ಸಮೀಪದಲ್ಲಿಯೇ ಅವರು ಇರಬೇಕಾಗಿತ್ತೆಂದೂ ಸೂಚಿಸಲಾಗಿದೆ[1] ಈ ಅಂಗರಕ್ಷಕ ಪಡೆಯು 'ವೀರಶೋಳ' ನೆಂಬ ಬಿರುದನ್ನು ಹೊಂದಿದ್ದ ಚೋಳ ಒಂದನೇ ಪರಾಂತಕನ ಆಳ್ವಿಕೆಯ ಕಾಲದಲ್ಲಿ ಅಸ್ತಿತ್ವಕ್ಕೆ ಬಂದಿರಬೇಕು ಆದ್ದರಿಂದ ಭೋಗ್ಯಕ್ಕೆಂದು ಭೂಮಿಯನ್ನು ತೆಗೆದುಕೊಂಡ ಆ ವ್ಯಕ್ತಿ ಚೋಳಪಡೆಗೆ ಸೇರಿದವನಾಗಿರಬೇಕು ಪ್ರಸ್ತುತ ಕೊಡಗೆಯನ್ನು ಪಡೆದುದು 'ವಲಂಗೈಸೇನೆ' ಬಹುಶಃ ಈ ದಳದ ಮುಖ್ಯಸ್ಥನಾದ ಮೀಕ್ಕಂಡರಿಗೆ ಈ ದತ್ತಿಯನ್ನು ಬಿಟ್ಟಿರಬೇಕು 'ವಲಂಗೈಸೇನೆ' ಎಂಬ ತುಕಡಿಯೂ ಚೋಳರ ಕಾಲದಲ್ಲಿಯೇ ಅಸ್ತಿತ್ವದಲ್ಲಿದ್ದುದು ಆದರೆ ಪ್ರಕೃತ ಶಾಸನದಿಂದ ಸೇನೆಯು ಹೊಯ್ಸಳರ ಆಧಿಪತ್ಯವನ್ನು ಅಂಗೀಕರಿಸಿ ಅವರಿಗೆ ನಿಷ್ಠರಾಗಿದ್ದುದು ಸ್ಪಷ್ಟಪಡುತ್ತದೆ

ಹೊನ್ನೂರಿನ ಯಳಂ ೧೮ನೆಯ ಶಾಸನದಲ್ಲಿ ತುಳುವಲಮಹಾದೇವಿಚತುರ್ವೇದಿಮಂಗಲವಾದ ಹೊನ್ನೂರಿನ ದೇವರುಗಳಿಗೆ ದತ್ತಿ ಕೊಟ್ಟ ವಿಷಯವಿದೆ ಈ ತುಳುವಲಮಹಾದೇವಿಯು ಬಹುಶಃ ಇಮ್ಮಡಿ ಬಲ್ಲಾಳನ ರಾಣಿಯಾಗಿದ್ದು ಆ ಗ್ರಾಮಕ್ಕೆ ಆಕೆಯ ಹೆಸರನ್ನು ಇಟ್ಟಿರಬಹುದು ಈಕೆ ಗುತ್ತವಂಶದ ಇಮ್ಮಡಿ ವಿಕ್ರಮಾದಿತ್ಯನ ಮಗಳೆಂದೂ ತಿಳಿಯಬಂದಿದೆ[2] ಇದೇ ಬಲ್ಲಾಳನ ಮತ್ತೊಂದು ಶಾಸನದಲ್ಲಿ (ಕೊ ಗಾ ೫) ತ್ರಿಭುವನಮಾದೇವಿಚತುರ್ವೇದಿಮಂಗಲದ ಹೆಸರಿದೆ ಸು ೧೧ನೆಯ ಶತಮಾನದ ಶಾಸನವೊಂದರಲ್ಲಿ ಕೊಳ್ಳೇಗಾಲಕ್ಕೆ ಈ ಹೆಸರಿದ್ದುದು ಕಂಡುಬರುತ್ತದೆ ಚೋಳ ರಾಣಿಯಾಗಿದ್ದಿರಬಹುದಾದ ಈ ತ್ರಿಭುವನಮಹಾದೇವಿಯು ರಾಜರಾಜನಿಗಿಂತ ಮುಂಚೆ ಆಳುತ್ತಿದ್ದ ಉತ್ತಮಚೋಳನ

---

1 *South Indian Inscriptions* Vol xviii (ed K G Krishnan) Introduction p V

2 *Bombay Gazetteer*, Vol I pt II p 583

ಅಥವಾ ಒಂದನೇ ಕುಲೋತ್ತುಂಗನ ರಾಣಿಯಾಗಿರಬೇಕು ಹೊಸ್ಸೂರಿನ ಶಾಸನದಲ್ಲಿ ಕುಲೇಶ್ವರಮುಡೈಯನಾಯನಾರ್ ಹಾಗೂ ಶ್ರೀಕಯ್ ಉಡೈಯಾರ್ (ದುರ್ಗೈಉಡೈಯಾರ್ ಇರಬಹುದು) ಎಂಬ ದೇವ ದೇವಿಯರಿಗೆ ನೀಡಿದ ದತ್ತಿಯನ್ನು 'ಶ್ರೀದನ'ವೆಂದು ವರ್ಣಿಸಲಾಗಿದೆ ಈ ಪದವನ್ನು 'ಸ್ತ್ರೀದನವ್' ಎಂದರೆ ಬಳುವಳಿ ಎಂಬ ಪದಕ್ಕೆ ಸಮಾನವೆಂದು ಪರಿಗಣಿಸಲಾಗಿದೆ[1] ಆದರೆ ಈ ಅರ್ಥ ಇಲ್ಲಿ ಹೊಂದುವುದಿಲ್ಲ 'ಶ್ರೀ' (ಸಿರಿ=ಲಕ್ಷ್ಮಿ) ದೇವಿಗೆ ಕೊಟ್ಟ ಕೊಡಗೆ ಎಂದು ಇದನ್ನು ಅರ್ಥೈಸಲವಕಾಶವಿದೆ

ಗಂಗೈಕೊಂಡಶೋಳಮಂಡಲಕ್ಕೆ ಸೇರಿದ ಪದಿನಾಡಿನಲ್ಲಿರುವ ಉತ್ತಮಶೋಳನಲ್ಲೂರೆಂದು ಕರೆಯುವ ಮುಡೈಯೂರಿನಲ್ಲಿರುವ ವಲ್ಲಾಳೀಶ್ವರ ದೇವಾಲಯವು ಇಮ್ಮಡಿ ಬಲ್ಲಾಳನಿಂದ ನಿರ್ಮಾಣವಾಯಿತು ರಾಜನಿಗೆ ಪುಣ್ಯವಾಗಲೆಂದು ಕಂದೈಯಮಾಣನು ದೇವಾಲಯದ ಪೂಜಾದಿಕಾರ್ಯಗಳನ್ನು ವಹಿಸಿಕೊಂಡನು (ಯಳಂ ೩೯) ಈಗಿನ ಯಿರಿಯೂರೇ ಮುಡೈಯೂರು ಯಳಂ ೧೯೦ ಈ ರಾಜನ ಕಾಲದ ಕುತೂಹಲಕರವಾದ ತಮಿಳು ಶಾಸನ ಅದರಲ್ಲಿ ಅಪರೂಪವಾಗಿ ತುರುಗಾಳಗವನ್ನು ಸೂಚಿಸುವ 'ತುರುಪರಿವಿಲ್‌ಕಾದಿ' ಎಂಬ ಕನ್ನಡದ ಪದ ಪ್ರಯೋಗವಿದೆ

ಕೊ ಗಾ ೧೧೦ ವೀರಬಲ್ಲಾಳನ ಶಾಸನ ಆದರಲ್ಲಿ ಕೊಟ್ಟಿರುವ ಕಾಲದ ವಿವರವು ಕ್ರಿ ಶ ೧೨೧೦ಕ್ಕೆ ಸರಿಹೊಂದುತ್ತದೆ ಶಕವರ್ಷವನ್ನು ಸೂಚಿಸಿಲ್ಲ ಶಾಸನವು ಮುಮ್ಮಡಿ ಬಲ್ಲಾಳನ ಕಾಲಕ್ಕಿಂತ ಬಹು ಹಿಂದಿನ ಕಾಲದ್ದಾದ್ದರಿಂದ ಇಲ್ಲಿ ಉಕ್ತನಾಗಿರುವ ರಾಜನನ್ನು ಇಮ್ಮಡಿ ಬಲ್ಲಾಳನೆಂದು ಗುರುತಿಸಿದೆ ಶಾಸನದಲ್ಲಿ ಮಹಾಪ್ರಧಾನ ಪೆರಿಯದಣ್ಣಾಯಕ ಮತ್ತು ಸೋವಣದಣ್ಣಾಯಕರೆಂಬ ಆತನ ಇಬ್ಬರು ಸೇನಾಪತಿಗಳ ಹೆಸರುಗಳಿವೆ ಈ ಮುಂಚೆ ಇವರ ಹೆಸರುಗಳು ಎಲ್ಲಿಯೂ ಬಂದಂತಿಲ್ಲ

ಕೊಳ್ಳೇಗಾಲ ತಾಲ್ಲೂಕಿನ ಎರಡು ಶಾಸನಗಳು (ಕೊ ಗಾ ೪ ಮತ್ತು ೧೧೧) ನರಸಿಂಹನ ಕಾಲದವು ಮೊದಲನೆಯದು ಮಹಾಜನರು ವಂಡುವರೈಪೆರುಮಾಳಿಗೆ 'ತಿರುವಿಡೈಯಾಟ್ಟ'ವಾಗಿ ಭೂಮಿಯನ್ನು ದತ್ತಿಕೊಟ್ಟುದನ್ನು ತಿಳಿಸುತ್ತದೆ ಈ ದೇವರಗುಡಿಯು ಕೊಳ್ಳಾಗರ ಅಥವಾ ತ್ರಿಭುವನಮಾದೇವಿಚತುರ್ವೇದಿಮಂಗಲದ ವಿಣ್ಣ ತಿರುಮುಟ್ಟಮ್ ಅಥವಾ ತಿರುವೇಕರ್ಯೋಯಿಲಲ್ಲಿ ಇದ್ದಂತೆ ತೋರುತ್ತದೆ ಈ ಎರಡು ಶಾಸನಗಳು ನಾರಸಿಂಗದೇವನ ಆಳ್ವಿಕೆಯನ್ನು ಸೂಚಿಸಿದರೂ ಆತ ಇಮ್ಮಡಿ ನರಸಿಂಹನೇ ಇಲ್ಲವೇ ಮುಮ್ಮಡಿ ನರಸಿಂಹನೇ ಎಂಬುದನ್ನು ನಿರ್ಧರಿಸಲು ಸಾಧ್ಯವಿಲ್ಲ ಏಕೆಂದರೆ ಶಕವರ್ಷಗಳನ್ನು ತಿಳಿಸದೆ ಕ್ರಮವಾಗಿ ಕೇವಲ ತಾರಣ ಮತ್ತು ಪಾರ್ಥಿವ ಸಂವತ್ಸರಗಳು ಈ ಶಾಸನಗಳಲ್ಲಿ ಉಕ್ತವಾಗಿದ್ದು ಆ ಸಂವತ್ಸರಗಳು ಈ ಇಬ್ಬರು ರಾಜರ ಆಳ್ವಿಕೆಯ ಕಾಲದಲ್ಲೂ ಸಂಭವಿಸುತ್ತವೆ ಕ್ರಿ ಶ ೧೨೧೭ರ ಕುಲಗಾಣದ ವಾಸುದೇವ ದೇವಾಲಯದ ಪ್ರದಕ್ಷಿಣಾಪಥ (ತಿರುನಡೈಮಾಳಿಗೈ)ವನ್ನು ಪೋಟೆಯದಣ್ಣಾಯಕ ಮತ್ತು ಶಂಕರಪಾಡಿಯ ವಿಟ್ಟಲನ್ ಎಂಬುವರು ನಿರ್ಮಿಸಿದರೆಂದು ಇಮ್ಮಡಿ ನರಸಿಂಹನ ಶಾ ನ ೩೨೩ನೆಯ ಶಾಸನವು ತಿಳಿಸುತ್ತದೆ ಈ ಪೋಟೆಯದಣ್ಣಾಯಕನೇ ಮೂಡಹಳ್ಳಿ ಶಾಸನದಲ್ಲಿ ಉಕ್ತನಾಗಿರುವ ಪೊಳಯದಣ್ಣಾಯಕನಾಗಿರಬಹುದೆಂದು ಹೇಳಲು ಸಾಧ್ಯವಿಲ್ಲ[2] ಆ ಶಾಸನದ ಕಾಲ ಕ್ರಿ ಶ ೧೨೩೭ ಮತ್ತು ಆತನೇ ಬಹುಶಃ ಮುಮ್ಮಡಿ ನರಸಿಂಹನ ಕೈಕೆಳಗಿದ್ದ ಸೇನಾಪತಿಯಾಗಿರಬಹುದು[3]

ಪ್ರಸ್ತುತ ಸಂಪುಟದಲ್ಲಿರುವ ಸೋಮೇಶ್ವರನ ಎಲ್ಲ ಶಾಸನಗಳೂ ತಮಿಳು ಮತ್ತು ಗ್ರಂಥಾಕ್ಷರಗಳಲ್ಲಿವೆ ಕ್ರಿ ಶ ೧೨೬೬ಕ್ಕೆ ಸೇರಿದ ಯಳಂ ೮೮ನೆಯ ಶಾಸನವು ಮಹಾಪ್ರಧಾನ ಪೆರ್ಗಡಿದೇವದಣ್ಣಾಯಕನು ಕೊಟ್ಟ ಕೊಡುಗೆಯನ್ನು ಉಲ್ಲೇಖಿಸುತ್ತದೆ ಇವನು ಶ್ರೀರಂಗದಂಡನಾಯಕನ ಮಗ ಕಾಲವನ್ನು ಸೂಚಿಸಿಲ್ಲದ ಯಳಂ ೯೮ನೆಯ ಶಾಸನವು 'ಕುಮಾರ' ಪೆರ್ಗಡಿದೇವನನ್ನು ಶ್ರೀರಂಗದಣ್ಣಾಯಕನ ಮಗನೆಂದು ನಿರ್ದೇಶಿಸಿದೆ ಆದರೆ ಹೆಚ್ಚು ಕುತೂಹಲಕರವಾದ ವಿಷಯವೆಂದರೆ ಕ್ರಿ ಶ ೧೨೪೬ರ ಶಾ ನ ೧೨೮ರಲ್ಲಿ ಮಹಾಪ್ರಧಾನ ಪೆರುಮಾಳದಣ್ಣಾಯಕನ ಹೆಸರು ಉಕ್ತವಾಗಿರುವುದು ಈ ಶಾಸನದಲ್ಲಿ ದಣ್ಣಾಯಕ ಎಂಬುದನ್ನು 'ದೆಣ್ಣಾಯ್ಕ'ನೆಂದು ತಪ್ಪಾಗಿ ಬಳಸಿದೆ ಈ ಪೆರುಮಾಳದೇವ ಯಾರು? ಸೋಮೇಶ್ವರನ ಮಗ ಮುಮ್ಮಡಿ ನರಸಿಂಹನ ಆಡಳಿತಾವಧಿಯಲ್ಲಿ ಆ ಹೆಸರಿನ ಪ್ರಖ್ಯಾತ ಸೇನಾಪತಿ ಇದ್ದು ಆತನೇ ಮುಮ್ಮಡಿ ಬಲ್ಲಾಳನ ಕಾಲದಲ್ಲೂ ಅಧಿಕಾರವನ್ನು ಮುಂದುವರೆಸಿದನೆಂಬುದು ಗೊತ್ತಿರುವ

[1] *South Indian Temple Inscriptions* Ed T N Subramaniam LXVIII

[2] ಎ ಕ III (1974) ನಂಗೂ 194

[3] Cf William Coelho '*The Hoysala vamśa*' p 183 Note 5

ವಿಷಯ ಪ್ರಕೃತ ಶಾಸನದಲ್ಲಿ ಉಕ್ತನಾಗಿರುವ ಸೇನಾಪತಿಯು ಆತನೇ ಎಂದು ಗುರುತಿಸಿದರೆ, ಈ ಪೆರುಮಾಳದೇವನು ಸೋಮೇಶ್ವರನ ಕಾಲದಲ್ಲಿ ಬಹಳ ಚಿಕ್ಕವನಾಗಿದ್ದಾಗಲೇ ಅಧಿಕಾರ ವಹಿಸಿಕೊಂಡಿರಬಹುದೆಂದು ಊಹಿಸಿ ೩೦ ವರ್ಷಕ್ಕೂ ಹೆಚ್ಚು ಕಾಲ ಅಧಿಕಾರದಲ್ಲಿದ್ದು ಮುಮ್ಮಡಿ ಬಲ್ಲಾಳನ ಆಳ್ವಿಕೆಯ ಪೂರ್ವಾರ್ಧದ ವರೆಗೆ ಜೀವಿಸಿದ್ದನೆಂದು ಹೇಳಬಹುದು

ಮುಮ್ಮಡಿ ನರಸಿಂಹನ ಕೆಲವು ಶಾಸನಗಳು ಕುತೂಹಲಕರವಾಗಿವೆ ಕ್ರಿ ಶ ೧೨೬೬ಕ್ಕೆ ಸೇರಿದ ಯಳಂ ೯ನೆಯ ತಮಿಳು ಶಾಸನದಲ್ಲಿ ರಾಜಕೇಸರಿನಲ್ಲೂರೆಂಬ. ಪ್ರತಿನಾಮಧೇಯವುಳ್ಳ ಇಳಮರುದೂರಿನ ನಾಯಿಂದ ಕೇತ್ತೈಯು ಪರಾಕ್ರಮದಿಂದ ಹುಲಿಯನ್ನು ಕೊಂದುದಕ್ಕಾಗಿ ಭೂಮಿಯನ್ನು ದತ್ತಿಯಾಗಿ ಪಡೆದ ವಿಷಯವಿದೆ ಗಾವುಂಡರು, ಸ್ಥಾನಿಕರು ವ್ಯಾಪಾರಿಗಳು (ವಿಯಾಬಾರಿ), ಇಳಮಯರ್ ಮತ್ತು ಐಮಣಿಗರು ನೀಡಿರುವ ಈ ಕೊಡುಗೆಯನ್ನು 'ನೇತ್ತಲ್ ಕುಡಂಗೈ' ಎಂದು ವರ್ಣಿಸಿದೆ ಅದು ಕನ್ನಡ ಶಾಸನಗಳಲ್ಲಿ ಬರುವ 'ನೆತ್ತರುಕೊಡಗೆ' ಇಳಮಯರ್ ಒಬ್ಬರನ್ನುಳಿದು ಉಳಿದೆಲ್ಲಾ ಅಧಿಕಾರಿಗಳು ಹಾಗೂ ಅಧಿಕಾರಿಸಂಘಗಳು ಕನ್ನಡ ಶಾಸನಗಳಲ್ಲೂ ಉಕ್ತವಾಗಿರುವುದು ಕಂಡುಬರುತ್ತದೆ

ಮೂರನೆಯ ವರ್ಷದ (ಕ್ರಿ ಶ ೧೨೬೭) ಆಗರದ (ಯಳಂ ೧೨೧) ಶಾಸನವೂ ತಮಿಳಿನಲ್ಲಿದೆ ಅದು ದುರ್ಗೈಯಾರಗರದ ತಿರುವಿರಾಮೀಶ್ವರಮುಡೈಯಾರ್ ದೇವಾಲಯಕ್ಕೆ ನಾಲ್ಕು ಸಾಲು ಮನೆಗಳನ್ನು ದತ್ತಿಬಿಟ್ಟ ವಿಷಯವನ್ನು ತಿಳಿಸುತ್ತದೆ ೨೨ ಅಡಿ ಅಳತೆಯ ಮನೆಗಳಿಂದ ಬರುವ 'ಸಿದ್ದಾಯ'ದಲ್ಲಿ ಅರ್ಧದಷ್ಟನ್ನು ಕಾರ್ತೀಕಪೂಜೆಗೆ ವಿನಿಯೋಗಿಸಲು ಬಿಟ್ಟಿದೆ 'ಸಿದ್ದಾಯ' ಎಂಬುದನ್ನು ಬಹುಶಃ 'ವ್ಯವಸಾಯೋತ್ಪನ್ನ'ವೆಂಬ ಅರ್ಥದಲ್ಲಿ ಬಳಸಿರಬೇಕೆನ್ನಲಾಗಿದೆ ಆದರೆ ಪ್ರಸ್ತುತ ಶಾಸನವು ಈ ಸುಂಕವನ್ನು ಮನೆಗಳ ಮೇಲೂ ವಿಧಿಸಲಾಗುತ್ತಿತ್ತೆಂಬುದನ್ನು ತೋರಿಸುತ್ತದೆ ಮನೆಯ ಸಿದ್ದಾಯ (ಮನೆಗೆ ವಿಧಿಸುವ ಸುಂಕ ಅಥವ ಸಿದ್ದಾಯ)ವೆಂದು ಶಾಸನಗಳಲ್ಲಿ ಉಕ್ತವಾಗಿರುವ ವಿಷಯ ತಿಳಿದಿದೆ[1] ಸಿದ್ದಾಯವೆಂದರೆ ವ್ಯವಸಾಯೋತ್ಪನ್ನ ಸುಂಕಮಾತ್ರ ಆಗಿರಬೇಕೆಂಬ ನಿಯಮವಿಲ್ಲವೆಂಬುದನ್ನು ತೋರಿಸುವ ಕೆಲವು ದೃಷ್ಟಾಂತಗಳಿವೆ ೨೨ ಅಡಿ ಅಳತೆಯುಳ್ಳ ಪ್ರತಿಯೊಂದು ಮನೆಯ ಅರ್ಧಭಾಗಕ್ಕೆ ಮಾತ್ರ ಸುಂಕವನ್ನೆತ್ತುತ್ತಿದ್ದುದು ಈ ಶಾಸನದಿಂದ ತಿಳಿದುಬರುವ ಗಮನಾರ್ಹ ಸಂಗತಿ ಈ ಆದಾಯವನ್ನು ಕಾರ್ತಿಗೈಪೂಜೆಯ ಆಚರಣೆಗಾಗಿಯೇ ನೀಡಲಾಯಿತೆಂಬುದು ಸ್ಪಷ್ಟವಾಗಿರುವ ಸಂಗತಿ

ಅದೇ ಊರಿನ ಕ್ರಿ ಶ ೧೨೯೦ರ ಇದೇ ರಾಜನ ಇನ್ನೊಂದು ತಮಿಳು ಶಾಸನ(ಯಳಂ ೧೧೧)ವನ್ನು ಇಲ್ಲಿ ಗಮನಿಸಬೇಕು ಆಳ್ವಾನ್ ಬಟ್ಟನ್ ಎಂಬ ಅದೇ ದೇವಾಲಯದ ಸ್ಥಾನಪತಿಯು ದೇವಾಲಯದಲ್ಲಿ ಪೂಜಾಕಾರ್ಯಗಳಿಗೆ ಮಾಡಿದ ವ್ಯವಸ್ಥೆಯನ್ನು ಈ ಶಾಸನ ವಿವರಿಸುತ್ತದೆ ಮೂಲತಃ ಪೂಜೆಯ ಹಕ್ಕು ತಿರುಚಿಟ್ಟಂಬಲಮುಡೈಯಾರ್ ವಂಶದವರಿಗೂ ಮತ್ತು ಇತರರಿಗೂ ಇತ್ತು ಆದರೆ ಈ ಶಾಸನದಂತೆ ಅಲ್ಲಿ ಹೆಸರಿಸಿರುವ ೫ ದೇವಾಲಯಗಳಲ್ಲಿ ೩೦ ದಿನಗಳ ಅವಧಿಯಲ್ಲಿ ೧೯ ದಿನಗಳ ಪೂಜಾಕಾರ್ಯವನ್ನು ತಿರುವಳಿಮುದಲಿಆರ್‌ರ ವಂಶದವರಿಗೆ ವಹಿಸಲಾಯಿತು ಅವರೂ ದೇವಾಲಯದ ಆಸ್ತಿ ಮತ್ತು ಆದಾಯಗಳನ್ನು ಅನುಭವಿಸುವ ಹಕ್ಕನ್ನೂ ಪಡೆದರು ಈ ರೀತಿಯ ಹಕ್ಕಿನ ವರ್ಗಾವಣೆಯೂ ಅಧಿಕಾರವರ್ಗದವರ ಮುಖಾಂತರವೇ ನಡೆದು ರಾಜರಾಜಪುರವೆಂಬ ಪ್ರತಿನಾಮಧೇಯವುಳ್ಳ ತಳೈಕ್ಕಾಡಿನ ಸ್ಥಾನಪತಿಯು ಇದನ್ನು ಪಡೆದನು ಈ ಪದ್ಧತಿಯು ದಕ್ಷಿಣಭಾರತದ ದೇವಾಲಯಗಳಲ್ಲಿ ಇಂದಿಗೂ ವಾಡಿಕೆಯಲ್ಲಿದ್ದು ಅದರಂತೆ ದೇವಾಲಯದ ಅರ್ಚಕರು ಸರದಿಯ ಪ್ರಕಾರ ಅಧಿಕಾರದಲ್ಲಿದ್ದು ಆಸ್ತಿ ಹಾಗೂ ಆದಾಯಗಳನ್ನು ಅನುಭವಿಸುವ ಹಕ್ಕನ್ನು ಪಡೆದಿರುವುದು ಗಮನಿಸಬೇಕಾದ ಸಂಗತಿ

ಕ್ರಿ ಶ ೧೨೬೩ರ ಚಾ ನ ೩೧೦ನೆಯ ಕಟ್ಟವಾಡಿಯ ಶಾಸನವು ಹದಿನಾಡು ಪ್ರಾಂತವು ಕುಮಾರನಾಡು, ಹಿರಿಯನಾಡು ಮತ್ತು ತೊಟ್ಟನಾಡು ಎಂಬ ಮೂರು ಉಪನಾಡುಗಳನ್ನು ಒಳಗೊಂಡಿತ್ತೆಂಬುದನ್ನು ತಿಳಿಸುತ್ತದೆ ಆದರೆ ಕ್ರಿ ಶ ೧೨೭೪ರ ಕೊ ಗಾ ೧೧೨ನೆಯ ಶಾಸನದ ಪ್ರಕಾರ ಕುಮಾರನಾಡು ಹಾಗೂ ತುಟ್ಟನಾಡು ಒಂದೇ ಆಗಿದ್ದಂತೆ ತೋರುತ್ತದೆ ಮತ್ತು ಮುಮ್ಮಡಿ ವೀರಬಲ್ಲಾಳನ ಶಾಸನದಲ್ಲಿ (ಚಾ ನ ೧೪೯) ತೊಟ್ಟನಾಡು ಹಾಗೂ ತಗಡೂರು ಮತ್ತು ಮೋಗೂರುಗಳನ್ನು ಕುಮಾರನಾಡಿನ ಭಾಗಗಳೆಂದು ಹೇಳಿದೆ ಅಂಚವಾಡಿಯ ಶಾಸನವು (ಚಾ ನ ೨೫೩) ಹಿರಿಯನಾಡನ್ನಲ್ಲದೆ ಕೈಯರನಾಡು ಮತ್ತು ಪಳಟುನಾಡು ಎಂಬ ಇನ್ನೆರಡು ನಾಡುಗಳನ್ನು ಹೆಸರಿಸುತ್ತದೆ

ಕ್ರಿ ಶ ೧೨೬೬ರಲ್ಲಿ ನಾಲ್ವರು ಹೆಗ್ಗಡೆಗಳು ಹದಿನಾಡಿಗೆ ಸೇರಿದ ಹೆಬ್ಬಸೂರು ಗ್ರಾಮದ ಅಧಿಕಾರ ನಡೆಸಲಾರದೆ

[1] ಎ ಕ VII Sk 112

ಸಂಬಂಧಪಟ್ಟವರಿಗೆ ತಿಳಿಸಲು ಅವರ ಸ್ಥಳದಲ್ಲಿ ಬೇರೆಯವರನ್ನು ನಿಯಮಿಸಿ ಆಡಳಿತದ ವ್ಯವಸ್ಥೆ ಮಾಡಲಾಯಿತು ದುರದೃಷ್ಟವಶಾತ್ ಆ ಶಾಸನವು (ಚಾ ನ ೨೨೦) ಅಪೂರ್ಣವಾಗಿದ್ದು ಉಳಿದ ವಿವರಗಳೆಲ್ಲಾ ನಷ್ಟವಾಗಿವೆ

ನರಸಿಂಹನ ಆಳ್ವಿಕೆಯನ್ನು ತಿಳಿಸುವ ಆಲದೂರಿನ ಶಾಸನದ (ಚಾ ನ ೧೦೩) ತೇದಿಯ ವಿವರ ಶಕ ೧೦೨೨, ಪಾರ್ಥಿವ, ಕಾರ್ತಿಕ ಶು ೧, ಶುಕ್ರವಾರ ಎಂದಿದೆ ಈ ವಿವರಗಳು ಸರಿಯಾಗಿಲ್ಲ ಉಕ್ತವಾಗಿರುವ ಶಕವರ್ಷವು ಬಹುಧಾನ್ಯ ಸಂವತ್ಸರಕ್ಕೆ ಹೊಂದುತ್ತಿದ್ದು ಉಳಿದ ವಿವರಗಳು ಕ್ರಿ ಶ ೧೨೭೮ ಸೆಪ್ಟೆಂಬರ್ ೨೭, ಮಂಗಳವಾರಕ್ಕೆ ಸಮೀಕರಿಸಬಹುದು ಆದರೆ ಆಗ ಒಂದನೇ ಬಲ್ಲಾಳನು ಆಳುತ್ತಿದ್ದುದು ಕಂಡುಬರುತ್ತದೆಯೇ ವಿನಃ ನರಸಿಂಹನಲ್ಲ ಶಾಸನವು ಪೆರುಮಾಳದಣ್ಣಾಯಕನ ಮಗ ಮಹಾಪ್ರಧಾನ ಲಕ್ಷ್ಮೀನಾರಾಯಣದಣ್ಣಾಯಕನನ್ನು ಹೆಸರಿಸುತ್ತದೆ ಪೆರುಮಾಳದಣ್ಣಾಯಕನು ಮುಮ್ಮಡಿ ನರಸಿಂಹನು ಆಳುತ್ತಿದ್ದ ಕಾಲದಲ್ಲಿದ್ದುದರಿಂದ ಶಾಸನ ಅವನ ಕಾಲದ್ದಾಗಿದ್ದು ಶಕವರ್ಷ ೧೨೦೬ ಎಂದಿಟ್ಟುಕೊಂಡಲ್ಲಿ ಅದು ಕ್ರಿ ಶ ೧೨೮೪ಕ್ಕೆ ಸರಿಹೊಂದುತ್ತದೆ ಪೆರುಮಾಳದಂಡನಾಯಕನ ಇನ್ನೊಬ್ಬ ಮಗ ಮಾಧವದಣ್ಣಾಯಕನ ಹೆಸರು ಬೇರೆ ಶಾಸನಗಳಲ್ಲಿ ಬಂದು ಪರಿಚಿತನಾಗಿದ್ದಾನೆ ಆದರೆ ಲಕ್ಷ್ಮೀನಾರಾಯಣ ದಣ್ಣಾಯಕನು ಮತ್ತೆಲ್ಲಿಯೂ ಉಕ್ತನಾಗಿಲ್ಲ ಮುಮ್ಮಡಿ ಬಲ್ಲಾಳನ ಕಾಲದವರೆಗೂ ಪೆರುಮಾಳದಣ್ಣಾಯಕನೇ ಅಧಿಕಾರದಲ್ಲಿ ಮುಂದುವರೆದಿರುವುದರಿಂದ ಬಹುಶಃ ಲಕ್ಷ್ಮೀನಾರಾಯಣನು ತಂದೆಗಿಂತ ಮೊದಲೇ ಗತಿಸಿರಬೇಕು ನರಸಿಂಹನ ಆಳ್ವಿಕೆಯನ್ನು ತಿಳಿಸುವ ೪೮೦ ೬ನೆಯ ಅಂಬಳೆಯ ತ್ರುಟಿತ ಶಾಸನದಲ್ಲಿ ಮಹಾಪ್ರಧಾನ ಪೆರುಮಾಳದೇವ ದಣ್ಣಾಯಕನ ಹೆಸರಿದೆ ಈತನೂ ಮೇಲೆ ಉಕ್ತನಾದವನೇ ಆಗಿದ್ದು ಶಾಸನವು ಮುಮ್ಮಡಿ ನರಸಿಂಹನಿಗೆ ಸಂಬಂಧಿಸಿದು ದೆಂದು ನಿರ್ಧರಿಸಬಹುದು

ಹಳೇ ಆಲೂರಿನ ಚಾ ನ ೧೯೫ನೆಯ ಶಾಸನವು ಹೊಸದಾಗಿ ದೊರೆತುದು ಅದರ ಕಾಲ ಕ್ರಿ ಶ ೧೨೬೮ ದಕ್ಷಿಣ ಅಯ್ಯಾವಳೆ ಎಂದು ವರ್ಣಿತವಾಗಿರುವ ಆಲೂರಿನ ವೇಳರು, ಕೋವರು, ಕುಡಿಂದರು ಮತ್ತು ನಲ್ಲೊಡೆಯರು ಇತ್ಯಾದಿ ವಿವಿಧ ಗುಂಪಿಗೆ ಸೇರಿದ ಅನೇಕರು ಚಂದ್ರನಾಥ ಬಸದಿಯನ್ನು ಜೀರ್ಣೋದ್ಧಾರ ಮಾಡಿ ಈ ಬಸದಿಯಲ್ಲಿ ಪ್ರತಿದಿನದ ಪೂಜೆ ಇತ್ಯಾದಿಗಳು ನಡೆಯುವುದಕ್ಕೆಂದು ಭೂಮಿಯನ್ನೂ ಮನೆಯನ್ನೂ ದತ್ತಿಯಾಗಿ ನೀಡಿದರು ಮಲ್ಲಿಸೇನಮಲಧಾರಿಗಳ ಶಿಷ್ಯರೂ ಪಾರಿಸದೇವನ ಮಕ್ಕಳೂ ಆದ ಆದಿಯಣ್ಣ ಮತ್ತು ಚೆಲುವಣ್ಣರು ಈ ದತ್ತಿಯನ್ನೂ ಪಡೆದರು

ಕ್ರಿ ಶ ೧೨೮೩ ಕ್ಕೆ ಸೇರಿದ ಚಾ ನ ೩೪೬ ನೆಯ ಶಾಸನದಲ್ಲಿ ಯಾವ ಅರಸನ ಹೆಸರೂ ಇಲ್ಲ ಆದರೆ ದಾನ ನೀಡಿದವನು ರಾವುತ್ತರಾಯನೆಂಬ ಬಿರುದನ್ನು ಹೊಂದಿದ್ದ ಮಹಾಪ್ರಧಾನ ಕೇತಯದಣ್ಣಾಯಕನೆಂದು ಹೇಳಿದೆ ಈ ಬಿರುದು ಪೆರುಮಾಳೆದಣ್ಣಾಯಕ, ಅವನ ಮಗ ಮಾಧವ, ಮೊಮ್ಮಗ ಕೇತಯದಣ್ಣಾಯಕರುಗಳಿಗಿತ್ತು ಈ ಆಧಾರದ ಮೇಲೆ ಈ ಶಾಸನದಲ್ಲಿ ಉಕ್ತನಾಗಿರುವ ಕೇತಯದಣ್ಣಾಯಕನನ್ನು ಪೆರುಮಾಳನ ಮೊಮ್ಮಗನೆಂದು ಗುರುತಿಸಬಹುದು ಆದರೆ ಈ ಮೊಮ್ಮಗನು ನಾಲ್ಕು ದಶಕಗಳ ತರುವಾಯ ಎಂದರೆ ಕ್ರಿ ಶ ೧೩೨೦ರ ನಂತರ ಅಧಿಕಾರದಲ್ಲಿದ್ದುದು ಕಂಡು ಬಂದಿದೆ[1] ಒಂದು ವೇಳೆ ಇಬ್ಬರೂ ಅನನ್ಯರೇ ಎಂದಾದರೆ ಈ ಶಾಸನದ ಕಾಲವೇ ಕೇತೆಯದಂಡನಾಯಕನ ಅತ್ಯಂತ ಮುಂಚಿನ ಕಾಲವಾಗುತ್ತದೆ ಹಾಗಲ್ಲದೆ, ಮೊಮ್ಮಗನಾಗಿರದೆ ಲಕ್ಷ್ಮೀನಾರಾಯಣನಂತೆಯೇ ಇವನೂ ಒಬ್ಬ ಮಗನಾಗಿರ ಬಹುದೇ ? ಹೇಗೂ ಶಾಸನವನ್ನು ಮುಮ್ಮಡಿ ನರಸಿಂಹನ ಕಾಲದ್ದೆಂದು ನಿರ್ಧರಿಸಬಹುದು

ತಮಿಳಿನ ೬ ಶಾಸನಗಳೂ ಸೇರಿದಂತೆ ಒಟ್ಟು ೨೪ ಶಾಸನಗಳಲ್ಲಿ ಮುಮ್ಮಡಿ ಬಲ್ಲಾಳನು ಉಕ್ತನಾಗಿದ್ದಾನೆ ೪೮೦ ೧೦೪ನೆಯ ತಮಿಳು ಶಾಸನವು ಆರು 'ಸಮಯ'ಗಳ ಪ್ರಮುಖರೂ ದಂಡನಾಯಕರೂ ಕೂತ್ತಾಡುವಾರರೂ ಹಾಗೂ ಇತರರೂ ತಿರುವಿರಾಮೀಶ್ವರಮುಡೈಯನಾಯನಾರಿಗೆ ಬಿಟ್ಟ ದತ್ತಿಯನ್ನು ಉಲ್ಲೇಖಿಸಿದೆ ಶಾಸನದಲ್ಲಿ ಶಾರ್ವರಿ ಸಂವತ್ಸರದ ಉಲ್ಲೇಖ ಮಾತ್ರವಿದ್ದು ಈ ಸಂವತ್ಸರ ಕ್ರಮವಾಗಿ ಇಮ್ಮಡಿ ಬಲ್ಲಾಳ ಹಾಗೂ ಮುಮ್ಮಡಿ ಬಲ್ಲಾಳನ ಆಳ್ವಿಕೆಯ ಕಾಲದಲ್ಲಿ ಎಂದರೆ ಕ್ರಿ ಶ ೧೧೯೦ ಮತ್ತು ೧೩೦೦ರಲ್ಲಿ ಬರುತ್ತದೆ ಲಿಪಿಯ ಆಧಾರದ ಮೇಲೆ ಶಾಸನವನ್ನು ಸು ೧೪ನೆಯ ಶತಮಾನದ್ದೆಂದು ನಿರ್ಧರಿಸಬಹುದು ಆದ್ದರಿಂದ ಶಾಸನವು ಮುಮ್ಮಡಿ ಬಲ್ಲಾಳನ ಕಾಲದ್ದೆಂದು ನಿಶ್ಚಯಿಸಬಹುದು

---

[1] William Coelho *Hoysala Vamsa*, p 242, Mysore Gazetteer, vol II pt ii, p 1403

ಯಳಂ ೧೧೦ನೆಯ ಶಾಸನವನ್ನೂ ಇದೇ ರಾಜನದೆಂದು ನಿರ್ಧರಿಸಿ, ಅದರ ತೇದಿಯ ವಿವರಗಳನ್ನು ಕ್ರಿ ಶ ೧೨೯೩, ಮಾರ್ಚ್ ೪ಕ್ಕೆ ಸಮೀಕರಿಸಿದೆ ಈ ಶಾಸನವು ಮೇಲೆ ಹೇಳಿದ ದೇವರಿಗೆ ಪ್ರತಿ ತಿಂಗಳೂ ನಡೆಯುವ ತಿರುಪಳ್ಳಿ ಎಟ್ಚಿಯನ್ನು ನಡೆಸಲು ದತ್ತಿ ಬಿಟ್ಟುದನ್ನು ತಿಳಿಸುತ್ತದೆ ತಿರುಪಳ್ಳಿಎಟ್ಚಿಯು ಶೈವ ಪ್ರಬಂಧ ಪ್ರತಿ ತಿಂಗಳೂ ಈ ಪ್ರಬಂಧದ ವಾಚನಕ್ಕಾಗಿ ಬಿಟ್ಟ ದತ್ತಿ ಇದು ಕ್ರಿ ಶ ೧೩೦೧ರ ಮಾಂಬಳ್ಳಿಯ ಯಳಂ ೧೪೭ನೆಯ ಶಾಸನವು ಮಾಂಬಳ್ಳಿಯ ವೈದ್ಯನಾಥೇಶ್ವರ ದೇವಾಲಯದ ಶ್ರೀಕಾರ್ಯಕ್ಕಾಗಿ ನಾನಾದೇಸಿಗಳು ದತ್ತಿಬಿಟ್ಟರೆನ್ನುತ್ತದೆ ಪಾತ್ರ ಭೋಗ ಮತ್ತು ನೈವೇದ್ಯ (ಸಾತ್ತುಪಡಿ)ಗಳು ಈ ಶ್ರೀಕಾರ್ಯದಲ್ಲಿ ನಿರ್ದಿಷ್ಟಗೊಂಡಿವೆ ರಾಜನ ಹೆಸರು ನಷ್ಟವಾಗಿದೆ ಆದರೆ ಕೊಟ್ಟಿರುವ ತೇದಿ ವಿವರಗಳು ಕ್ರಿ ಶ ೧೩೦೧ಕ್ಕೆ ಹೊಂದುತ್ತಿದ್ದು ಮುಮ್ಮಡಿ ಬಲ್ಲಾಳನ ಆಳ್ವಿಕೆಯ ಕಾಲಕ್ಕೆ ಸೇರುವುದರಿಂದ ಇದನ್ನೂ ಅವನಿಗೇ ಸಂಬಂಧಿಸಿದುದೆಂದು ನಿರ್ಧರಿಸಲಾಗಿದ

ಚಾಮರಾಜನಗರದ ತಮಿಳು ಶಾಸನವೊಂದು (ಚಾ ನ ೬೨) ವಾಳ್ಕೆಯಮ್ಮಿಗಿಯಾರಿಡುತ್ತಗೈ ಅಳಗಿಯಾನ್ ಎಂಬ ವ್ಯಕ್ತಿಗೆ ದೇವಾಲಯದ ಶ್ರೀವೈಷ್ಣವರು ಗ್ರಾಮವೊಂದನ್ನು ದತ್ತಿಯಾಗಿ ಕೊಟ್ಟ ವಿಷಯವನ್ನು ತಿಳಿಸುತ್ತದೆ ಆದರೆ ದೇವಾಲಯದ ಹೆಸರನ್ನು ಕೊಟ್ಟಿಲ್ಲ ಶಾಸನವು ವಿಷ್ಣು ದೇವಾಲಯವಾದ ಲಕ್ಷ್ಮೀನಾರಾಯಣ ದೇವಸ್ಥಾನದ ತಳವಾದಿಯ ಕಲ್ಲಿನ ಮೇಲೆ ಇರುವುದರಿಂದ ಇಲ್ಲಿ ಉಲ್ಲೇಖವಾಗಿರುವ ಶ್ರೀವೈಷ್ಣವರು ಆ ದೇವಾಲಯದ ಧರ್ಮದರ್ಶಿಗಳಾಗಿದ್ದಂತೆ ಕಂಡುಬರುತ್ತದ ದಾನ ಪಡೆದವನು 'ನಾನೂಱ್ಱುವನ್ ಮಂಡಪ'ವೆಂಬ ಮಹಾಮಂಟಪವನ್ನು ಕಟ್ಟಿಸಿದನೆಂದು ಶಾಸನವು ತಿಳಿಸುವುದರಿಂದ ಆತನ ಸೇವೆಯನ್ನು ಗೌರವಿಸಿ ಈ ದತ್ತಿಯನ್ನು ನೀಡಿರಬಹುದೆಂದು ತೋರುತ್ತದೆ ಆದರೆ ವಿವರಗಳೇನೂ ತಿಳಿದುಬರುವುದಿಲ್ಲ

ಕೊತ್ತಲವಾಡಿಯ ಶಾಸನದಿಂದ (ಚಾ ನ ೩೦೯) ತೆರಕಣಾಂಬಿಯ ವರದರಾಜಅಲ್ಲಾಳನಾಥನನ್ನು ಮಾಧವ ದಣ್ಣಾಯಕನು ಪ್ರತಿಷ್ಠಾಪಿಸಿದನೆಂದೂ ಮತ್ತು ಈ ಸಂದರ್ಭದಲ್ಲಿ ದೇವರಿಗೆ ದತ್ತಿ ನೀಡುವಾಗ ಆತನ ಮಗ ಕೇತೆಯ ದಣ್ಣಾಯಕನು ಜೊತೆಯಲ್ಲಿದ್ದನೆಂದೂ ತಿಳಿದುಬರುತ್ತದೆ ಶಾಸನವು ಕೊತ್ತಲವಾಡಿಯಲ್ಲಿ ದೊರೆತಿರುವುದರಿಂದ ದತ್ತಿ ಕೊಟ್ಟ ಭೂಮಿಯು ಇಲ್ಲಿಯೇ ಇದ್ದಿರಬಹುದೆಂದು ಊಹಿಸಬಹುದಾಗಿದೆ ದತ್ತಿಯ ವಿವರಗಳನ್ನು ಕೊಟ್ಟಿಲ್ಲ ಶಾಸನವು ಕ್ರಮವಾಗಿ ಮಾಧವನ ತಂದೆ ಪೆರುಮಾಳ ಮತ್ತು ತಾತ ಭೀಮ ಇವರನ್ನು ಉಲ್ಲೇಖಿಸುತ್ತದೆ ತೆರಕಣಾಂಬಿಯ ಲಕ್ಷ್ಮೀವರದರಾಜ ದೇವಾಲಯದಲ್ಲಿರುವ ದೇವರೇ ಹೀಗೆ ಪ್ರತಿಷ್ಠಿತವಾದದ್ದಾಗಿರಬೇಕು ಬಹುಶಃ ಅಲ್ಲಾಳನಾಥನ ಭಕ್ತನಾದ ಮಾಧವದಣ್ಣಾಯಕನು ಈ ದೇವಾಲಯವನ್ನು ಕಟ್ಟಿಸಿರಬೇಕು ಬಸವಾಪುರದ ಚಾ ನ ೨೩೫ನೆಯ ಶಾಸನವು ಇದೇ ಅಧಿಕಾರಿಯಿಂದ ವಿದ್ಯಾನಿಧಿ ಪ್ರಸನ್ನ ಕೇಶವಪುರವೆಂಬ ಅಗ್ರಹಾರವು ಸ್ಥಾಪಿತವಾಯಿತೆಂಬುದನ್ನೂ ನಂತರ ಆ ಊರಿನ ಮಹಾಜನಗಳು ದತ್ತಿ ಬಿಟ್ಟುದನ್ನೂ ತಿಳಿಸುತ್ತದೆ ಈ ಶಾಸನದ ವಿವರಗಳೂ ನಷ್ಟವಾಗಿವೆ ಈ ಅಧಿಕಾರಿಯ ಜನ್ಮಸ್ಥಳ ಹರದನಹಳ್ಳಿ ಇದಕ್ಕೆ ಆಗ ವಾಗ್ಗೆಯವೆಂಬ ಹೆಸರಿದ್ದು ಇದು ಎಣ್ಣೆನಾಡಿಗೆ ಸೇರಿತ್ತು ಕ್ರಿ ಶ ೧೩೪೦ಕ್ಕೆ ಸೇರಿದ ಚಾ ನ ೨೭೫ ರಿಂದ ೨೭೮ರ ವರೆಗಿನ ಶಾಸನಗಳು ಅದೇ ಊರಿನ ಅಚಲೇಶ್ವರದೇವರ ದೇವಾಲಯಕ್ಕಾಗಿ ಬೇರೆ ಬೇರೆ 'ಗೌಡು'ಗಳು ಕಂಬಗಳನ್ನು ಮಾಡಿಸಿಕೊಟ್ಟರೆಂಬುದನ್ನು ತಿಳಿಸುತ್ತದೆ ಈಗಿನ ದಿವ್ಯಲಿಂಗೇಶ್ವರ ದೇವಾಲಯವೇ ಶಾಸನಗಳಲ್ಲಿ ಉಕ್ತವಾಗಿರುವ ಅಚಲೇಶ್ವರ ದೇವಾಲಯ

ಚಾ ನ ೨೬೩ನೆಯ ಶಾಸನವು ದಿವ್ಯಲಿಂಗೇಶ್ವರವೆಂಬ ಅಚಲೇಶ್ವರ ದೇವಾಲಯವನ್ನು ಮಾಧವನ ಹತ್ತಿರ ಅಧಿಕಾರಿಯಾಗಿದ್ದ (ಮನೆಗೊಡು ?) ಮಗಯದ ಪುರುಷಗೌಡನ ಮಗ ಮಾರಗೌಡನು ಕಟ್ಟಿಸಿದನೆಂಬುದನ್ನು ಸ್ಪಷ್ಟವಾಗಿ ಸೂಚಿಸುತ್ತದೆ ಈತನು ದೇವಾಲಯವನ್ನು ಕಟ್ಟಿಸಿ ತಾನು ಸಾಯುವ ಹೊತ್ತಿನಲ್ಲಿ ದತ್ತಿನೀಡಿದನೆಂಬ ವಿಷಯವನ್ನು ತಿಳಿಸುವ ಈ ಶಾಸನ ಕುತೂಹಲಕರವಾಗಿದೆ ಅಲ್ಲಪ್ಪದಣ್ಣಾಯಕನ ಪತ್ನಿಯಾದ ಚಾಮವ್ವೆ ದಂಡನಾಯಕಿತಿಯು ತೆರಕಣಾಂಬಿಯಲ್ಲಿ ಪ್ರತಿಷ್ಠಿಸಿದ ಗೋಪೀನಾಥದೇವರಿಗೆ ಮಾಧವನು ಹೊಸಬಳಿನಾಡಿನ ಕಿಲಗೆರೆ ಮತ್ತು ಆದರ ಉಪಗ್ರಾಮ ಬೆಲಕುಪ್ಪೆಗಳನ್ನು ದತ್ತಿಬಿಟ್ಟನೆಂದು ಕಿಲಗೆರೆ ಶಾಸನ (ಚಾ ನ ೩೦೬) ತಿಳಿಸುತ್ತದೆ ಹೆಣ್ಣುಮಗಳೊಬ್ಬಳು ಅಧಿಕಾರವನ್ನು ವಹಿಸಿಕೊಂಡಿದ್ದ ವಿಷಯ ಇಲ್ಲಿದೆ

ಸತ್ತೇಗಾಲ ಶಾಸನವು (ಕೊ ಗಾ ೩೦) ಕುಡಕೂರೆಂಬ ಮಾಧವಪುರದ ಮಹಾಜನಗಳಿಗೆ ಮಾದಜೀಯನು ಕುರನೂಱು ಗ್ರಾಮವನ್ನು ಹಾಗೂ ಅದರ ಉಪಗ್ರಾಮಗಳನ್ನೂ ದಾನವಾಗಿ ನೀಡಿದನೆನ್ನುತ್ತದೆ ಆದರೆ ಅದೇ ಶಾಸನವು ರಾಜನು ತಾಮ್ರಶಾಸನದ ಮುಖಾಂತರ ಅವುಗಳನ್ನು ಮಾಧವದಣ್ಣಾಯಕನಿಗೆ ನೀಡಿದ್ದನೆಂಬುದನ್ನೂ ತಿಳಿಸುತ್ತದೆ

ಮಾದಜೀಯನು ಅವುಗಳನ್ನು ಹೇಗೆ ದತ್ತಿ ನೀಡಿದ? ಶಾಸನದ ಕಾಲವು ಕ್ರಿ ಶ ೧೩೨೧ ಆಗಿದ್ದು ಇದು ಮಾಧವನ ಹಾಗೂ ರಾಜನ ಆಳ್ವಿಕೆಯ ಕಾಲವೇ ಆಗಿದೆ ಮಾದಜೀಯನು ಮಹಾಜನಗಳಿಗೆ ನೀಡುವುದಕ್ಕಾಗಿ ಮಾಧವನಿಂದ ಅವುಗಳನ್ನು ಪಡೆದಿರುವ ಸಾಧ್ಯತೆ ಇದೆ ಪ್ರತಿಗ್ರಹಿಯು ಪ್ರಸನ್ನಮಾಧವಪುರವಾದ ಕುಡುಕೂರಿಗೆ ಸೇರಿದವನಾಗಿರುವುದರಿಂದ ಮಾದಜೀಯನ ಮೂಲಕ ದಾನವನ್ನು ಪಡೆದಿರಬಹುದೆಂದು ನಂಬುವ ಸಾಧ್ಯತೆ ಇದ

ಪ್ರಸ್ತುತ ಸಂಪುಟದಿಂದ ಬಲ್ಲಾಳನ ಇತರ ಕೆಲವು ಅಧಿಕಾರಿಗಳು ತಿಳಿದು ಬರುತ್ತಾರೆ ಕಾಟುದಂಡನಾಯಕ ಅವರಲ್ಲೊಬ್ಬನು ಅವನ ಅಳಿಯ ವಿರಣ್ಣನು ಮುಕ್ಕೊಡಿಹಳ್ಳಿ ಮತ್ತು ಮೇಲುಭಾಗಿಯ ಪ್ರಜೆಗವುಡುಗಳಿಂದ ದತ್ತಿಯನ್ನು ಪಡೆದನು (ಶಾ ನ ೩೬೬) ಮತ್ತಿಬ್ಬರು ಬಿಲಜೊಕ್ಕಯ್ಯ ಮತ್ತು ಬೋಗಯ್ಯ ದಂಡನಾಯಕರು (ಶಾ ನ ೨೯೨), ಇವರಿಬ್ಬರೂ ದಾನಿಗಳು ಬಿಲಜೊಕ್ಕಯ್ಯನನ್ನು ಮಹಾಪ್ರಧಾನ, ಸರ್ವಾಧಿಕಾರಿ ಮತ್ತು ಸಮಸ್ತ ಸೇನಾಧಿಪತಿಯೆಂದೂ ವರ್ಣಿಸಲಾಗಿದೆ ಶಾ ನ ೧೫೦ನೆಯ ಶಾಸನವು ಸವೆದುಹೋಗಿದ್ದು ಅದರಲ್ಲಿ ಮಹಾಪ್ರಧಾನನಾಗಿದ್ದ ಪೊರುಯೂರ ದಣ್ಣಾಯಕ ಎಂದಿದೆ ಇದು ಹೆಸರನ್ನು ಸೂಚಿಸದೆ ಈತನು ಪೊರಯೂರಿನವನಾದ ದಣ್ಣಾಯಕನೆಂದೂ ಅರ್ಥ ಹೇಳಬಹುದು ಪಿ ಪ ೧೯ನೆಯ ಶಾಸನದಲ್ಲಿ ಕಂಡುಬರುವ ಸಿಂಗಯದಣ್ಣಾಯಕನು ಮಾಧವದಣ್ಣಾಯಕನ ಮಗ, ಕೇತಯನ ತಮ್ಮ

## ವಿಜಯನಗರ

ಶಾ ನ ೨೨೬ ವೀರಬುಕ್ಕರಾಯನ ಆಳ್ವಿಕೆಯನ್ನು ಉಲ್ಲೇಖಿಸುತ್ತದೆ ಇತರ ವಿವರಗಳು ನಷ್ಟವಾಗಿವೆ ಅರಸನಿಗೆ ಮಹಾರಾಜಾಧಿರಾಜ ಹಾಗೂ ರಾಜಪರಮೇಶ್ವರ ಎಂಬ ಬಿರುದುಗಳಿವೆ ಶಾಸನದಲ್ಲಿ ಕೊಟ್ಟಿರುವ ತೇದಿ ವಿವರಗಳು—ಶಕ ೧೨೬೩, ಶ್ರೀಮುಖ, ಭಾದ್ರಪದ ಬ ೧೨—ಸರಿಹೊಂದುವುದಿಲ್ಲ ಶ್ರೀಮುಖ ಸಂವತ್ಸರವು ಶಕ ೧೨೫೫ಕ್ಕೆ ಹೊಂದುತ್ತಿದ್ದು, ಕೊಟ್ಟಿರುವ ಉಳಿದ ವಿವರಗಳು ಕ್ರಿ ಶ ೧೩೩೩ರ ನವೆಂಬರ್ ೬ಕ್ಕೆ ಹೊಂದುತ್ತವೆ ಈ ವಿವರಗಳನ್ನೂ ಪರೀಕ್ಷಿಸಲು ಸಾಧ್ಯವಿಲ್ಲವಾಗಿದೆ ಆದರೆ ಈ ತೇದಿ ಒಂದನೇ ಬುಕ್ಕನಿಗೆ ತುಂಬ ಮುಂಚಿನದಾಗಿದ್ದು ಈ ಕಾಲಕ್ಕಾಗಲೇ ತುಂಗಭದ್ರೆಯಿಂದ ದಕ್ಷಿಣಕ್ಕೆ ಬಹು ದೂರದಲ್ಲಿರುವ ಈ ಪ್ರದೇಶದಲ್ಲಿ ಬುಕ್ಕನು ಆಳುತ್ತಿದ್ದನೆಂದು ಊಹಿಸುವುದು ಕಷ್ಟ ಅವನ ಕಾರ್ಯಕ್ಷೇತ್ರ ಹಂಪೆ ಪ್ರದೇಶದ ಸುತ್ತಮುತ್ತ ಕೇಂದ್ರೀಕೃತವಾಗಿತ್ತು ಅಲ್ಲದೆ, ಆತನಿಗೆ ಸಾರ್ವಭೌಮ ಬಿರುದುಗಳಿರುವುದೂ ಗಮನಿಸಬೇಕಾದ ಅಂಶ ಆದ್ದರಿಂದ ಶಾಸನದ ತೇದಿಯನ್ನು ತಿಳಿಸುವಲ್ಲಿ ತಪ್ಪಾಗಿರುವುದು ಸ್ಪಷ್ಟ

ಕ್ರಿ ಶ ೧೩೫೪, ೧೩೫೯, ೧೩೫೯–೬೦ ಮತ್ತು ೧೩೬೬ಕ್ಕೆ ಕ್ರಮವಾಗಿ ಸೇರುವ ಕೊ ಗಾ ೬೨, ಯಳಂ ೧೫೫, ಕೊ ಗಾ ೨೨ ಮತ್ತು ಕೊ ಗಾ ೫೬ನೆಯ ಶಾಸನಗಳು ಕಂಪಣ್ಣವೊಡೆಯನ ಆಳ್ವಿಕೆಯನ್ನು ಉಲ್ಲೇಖಿಸುತ್ತವೆ ಈತ ಬುಕ್ಕನ ಮಗನೆಂಬುದು ಸುಪರಿಚಿತ ಕೊ ಗಾ ೨೨ ತಮಿಳು ಶಾಸನ ಅಲ್ಲಲ್ಲಿ ಹೋಗಿರುವ ಶಾ ನ ೨೨೧ನೆಯ ಶಾಸನ ಚಿಕ್ಕಕಂಪಣ್ಣನನ್ನು ಉಲ್ಲೇಖಿಸುವಂತೆ ತೋರುತ್ತದೆ ಈತ ಮೇಲೆ ಹೇಳಿದ ಕಂಪಣ್ಣವೊಡೆಯನೇ ಇರಬೇಕು

ಒಂದನೇ ಬುಕ್ಕನ ಆಳ್ವಿಕೆಗೆ ಸೇರುವ ಶಾ ನ ೨೬೪ ಮತ್ತು ೨೬೦ರ ಕಾಲ ಕ್ರಮವಾಗಿ ೧೩೬೩ ಹಾಗೂ ೧೩೬೮ ಇವು ಮಹಾಪ್ರಧಾನ ಬಸವಯ್ಯದಣ್ಣಾಯಕನನ್ನು ಉಲ್ಲೇಖಿಸುತ್ತವೆ ಎರಡನೆಯ ಶಾಸನದಲ್ಲಿ ಈ ಮಹಾಪ್ರಧಾನನು ಬ್ರಹ್ಮಕುಲಕ್ಕೆ ಸೇರಿದವನೆಂದು ಹೇಳಿದ ವಿಷ್ಣುವರ್ಧನಪ್ರತಾಪಭುಜಬಲಹೊಯ್ಸಳದೇಶವನ್ನಾಳುತ್ತಿದ್ದ ಗಣಪತಿಮನು ಈ ಪ್ರಧಾನಿಯ 'ಬಲದಕಯ್ಯ ಭಂಡಾರ'ವೆನಿಸಿದ್ದ ಶಾನ ೨೬೪ರಲ್ಲಿ ಈ ಪ್ರಧಾನಿಯ ಮನೆಯ ಅಧಿಕಾರಿ ನಾಗರಸ ಎಂಬುವನು ಕಂಡುಬರುತ್ತಾನೆ ಯಳಂ ೫೦ನೆಯ ಶಾಸನ ಮಹಾಮಂತ್ರಿ ಎಂದು ವರ್ಣಿತನಾಗಿರುವ ನಾಗರಾಜ ಅಥವಾ ನಾಗರಸ ಎಂಬ ಈತನ ಇನ್ನೊಬ್ಬ ಮಂತ್ರಿಯನ್ನು ಉಲ್ಲೇಖಿಸುತ್ತದೆ ಈ ಮಹಾಮಂತ್ರಿಯ ಅಪ್ಪಣೆಯ ಮೇರೆಗೆ ಉಪೇಂದ್ರಪುರವಾದ ಮದ್ದೂರಿನ ನೀಲಮಾಣಿಕ್ಯ ದೇವಾಲಯವನ್ನು ಚಂದರಸನು ಜೀರ್ಣೋದ್ಧಾರಗೊಳಿಸಿ ಅನೇಕ ದತ್ತಿಗಳನ್ನು ಬಿಟ್ಟನೆಂದು ತಿಳಿದುಬರುತ್ತದೆ

ಈ ಸಂಪುಟದಲ್ಲಿರುವ ಇಮ್ಮಡಿ ಹರಿಹರನ ಶಾಸನಗಳಲ್ಲಿ ಪ್ರಾಚೀನತಮ ಶಾಸನದ (ಶಾ ನ ೧೪೮) ಕಾಲ ಕ್ರಿ ಶ ೧೩೮೦ ಈತ ಸಂಗಮ ಹಾಗೂ ಕಾಮಾಯಿಯರ ಮೊಮ್ಮಗನೆಂದು ಇದರಲ್ಲಿ ಹೇಳಿದೆ ಈ ದಂಪತಿಗಳಿಗೆ ಹರಿಯಪ, ಕಂಪಣ, ಬುಕ್ಕ, ಮುದ್ದಪ ಮತ್ತು ಮಾರಪ ಎಂಬ ಮಕ್ಕಳು ಜನಿಸಿದರು ಇವರಲ್ಲಿ ಮಧ್ಯದವನಾದ ಬುಕ್ಕಪ ಇಮ್ಮಡಿ

ಉಳಿದುದನ್ನು ದಾನ ನೀಡಲಾಗಿದೆಯೆಂದು ಎರಡನೆಯ ಶಾಸನ ತಿಳಿಸುತ್ತದೆ ಸೋಮಹಳ್ಳಿ ತಾಮ್ರಶಾಸನವು[1] ಇದೇ ಕಾಲದ್ದೆಂಬುದನ್ನು ಇಲ್ಲಿ ಗಮನಿಸಬಹುದು ಹರಿಹರರಾಯನು '' ತಂಮ ತಂದೆ ದೇವರಾಯಮಹಾರಾಯರಿಗೆ ಶಾಶ್ವತ ಪುಣ್ಯಲೋಕಪ್ರೀತ್ಯರ್ಥ ''ವಾಗಿ ದತ್ತಿ ನೀಡಿದನೆಂದು ಅಲ್ಲಿ ಹೇಳಿರುವುದನ್ನು ಹಿಂದೆಯೇ ಗಮನಿಸಿದ್ದೇವೆ ಮೇಲಿನ ಹೇಳಿಕೆ ಒಂದನೇ ದೇವರಾಯನು ಆ ವೇಳೆಗೆ ಮರಣಹೊಂದಿರಬೇಕೆಂಬ ಊಹೆಗೆ ಎಡೆಮಾಡಿಕೊಟ್ಟಿದೆ ಆದರೆ, ಮೇಲೆ ಪರಿಶೀಲಿಸಿದ ಇವೆರಡೂ ಶಾಸನಗಳು ಅಂಥ ವಿಷಯವನ್ನೇನೂ ಉಲ್ಲೇಖಿಸುವುದಿಲ್ಲ

ವೀರದೇವರಾಯವೊಡೆಯನ ಆಳ್ವಿಕೆಯ ಕಾಲದ ಸು ೧೫ನೆಯ ಶತಮಾನದ ಲಿಪಿಯಲ್ಲಿರುವ ಹರದನಹಳ್ಳಿ ಶಾಸನದಲ್ಲಿ (ಚಾ ನ ೨೬೫) ವಿಶ್ವಾವಸು ಸಂವತ್ಸರದ ಮಾರ್ಗಶಿರ ಶು ೫ ಎಂಬಷ್ಟು ಮಾತ್ರ ತೇದಿಯ ವಿವರಗಳನ್ನು ಕೊಟ್ಟಿದೆ ಈ ವಿವರಗಳು ಇಮ್ಮಡಿ ದೇವರಾಯನ ಆಳ್ವಿಕೆಯಲ್ಲಿ ಕ್ರಿ ಶ ೧೪೨೫ರ ನವೆಂಬರ್ ೧೫ಕ್ಕೆ ಹೊಂದುತ್ತವ ಶಾಸನವನ್ನು ಅವನ ಆಳ್ವಿಕೆಗೆ ಸೇರಿಸಬಹುದಾಗಿದೆ ಅವನ ಕೈಕೆಳಗೆ ಅಧಿಕಾರಿಯಾಗಿದ್ದ ಹರಿಯಪ್ಪದಣ್ಣಾಯಕನನ್ನೂ ಈ ಸವೆದುಹೋಗಿರುವ ಶಾಸನ ಉಲ್ಲೇಖಿಸುತ್ತದೆ ಕ್ರಿ ಶ ೧೪೨೯ರ ಪುಣಜೂರು ಶಾಸನವು (ಚಾ ನ ೨೮೦) ದೇವದಣ್ಣಾಯಕನೆಂಬ ಇನ್ನೊಬ್ಬ ಅಧಿಕಾರಿಯನ್ನು ಹೆಸರಿಸುತ್ತದೆ ಮಾಂಬಳ್ಳಿಯ ಶಾಸನದಲ್ಲಿ (ಯಳಂ ೧೬೦) ಉಲ್ಲೇಖಿತ ವಾಗಿರುವ ಹರಿಹರನಾಥ ಎಂಬುದು ಅರಸನ ಹೆಸರೇ ಅಥವಾ ದೇವರನ್ನು ಸೂಚಿಸುತ್ತದೆಯೆ ಎಂಬುದನ್ನು ನಿರ್ಧರಿಸಲು ರೈಸ್‌ರವರಿಗೆ ಸಾಧ್ಯವಾಗಿರಲಿಲ್ಲ ಮಾಂಬಳ್ಳಿಯಲ್ಲಿ ಕಂಡುಬರುವ ಇತರ ಶಾಸನಗಳಿಂದ ಈ ಸ್ಥಳವನ್ನು ಹರಿಹರನಾಥ ಪಟ್ಟಣವೆಂದು ಕರೆಯಲಾಗುತ್ತಿತ್ತೆಂದು ತಿಳಿದುಬರುತ್ತದೆ ಕ್ರಿ ಶ ೧೩೯೪ರ ಯಳಂ ೧೫೫ನೆಯ ಶಾಸನವು ಈ ಸ್ಥಳದ ದೇವತೆಯನ್ನು 'ಮಾಂಬಳ್ಳಿಯಾದ ಹರಿಹರನಾಥಪಟ್ಟಣದ ಶ್ರೀ ವೈದ್ಯನಾಥದೇವ' ಎಂದು ಉಲ್ಲೇಖಿಸುತ್ತದೆ[2] 'ಮಾಂಬಳ್ಳಿಯಾದ ಹರಿಹರನಾಥನ ಪಟ್ಟಣದ ' ಎಂಬ ಮೂಲ ಪಾಠಕ್ಕೆ ಬದಲಾಗಿ ಯಳಂ ೧೬೦ರಲ್ಲಿ 'ಮಾಂಬಳ್ಳಿಯಾದ ಹರಿಹರನಾಥನ ಮಜ್ಜಣದ'[3] ಎಂದಿರುವುದು ತಪ್ಪೆಂದು ತೋರುತ್ತದೆ ಇದರಿಂದಾಗಿ ಹರಿಹರನಾಥ ಎಂಬುದು ದೇವತೆಯ ಅಥವಾ ಅರಸನ ಹೆಸರಾಗಿರದೆ ಊರೊಂದರ ಹೆಸರಾಗುತ್ತದೆ 'ಮಜ್ಜಣದ ಸ್ಥಳ'ವೂ ಅದಲ್ಲ

ಕ್ರಿ ಶ ೧೪೫೩ರ ಒಂದು ಶಾಸನ ಮಾತ್ರ (ಪಿ ಪ ೩೨) ಮಲ್ಲಿಕಾರ್ಜುನನ ಕಾಲದ್ದೆಂದು ಹೇಳಬಹುದಾಗಿದೆ ಈ ಶಾಸನ ಅವನ ಆಳ್ವಿಕೆಯನ್ನು ನೇರವಾಗಿ ಉಲ್ಲೇಖಿಸುವುದಿಲ್ಲ ಆದರೆ ಈ ಕಾಲದಲ್ಲಿ ಅರಸನಾಗಿದ್ದ ಮಲ್ಲಿಕಾರ್ಜುನರಾಯನಿಗೆ ಧರ್ಮವಾಗಬೇಕೆಂದು ಹಂಪರಸನೆಂಬ ಸುಂಕಾಧಿಕಾರಿಯು ಶ್ರೀಗಿರಿಕುಡಕೂರ ಅನ್ನದಾನಿ ಮಲ್ಲಿಕಾರ್ಜುನದೇವರಿಗೆ ಹಲವು ತೆರಿಗೆಗಳಿಂದ ಬಂದ ಆದಾಯವನ್ನು ದಾನ ನೀಡಿದನೆಂದು ನಿರೂಪಿಸುತ್ತದೆ

ಪಿರಿಯಾಪಟ್ಟಣದ ಶಾಸನವು (ಪಿ ಪ ೩) ಬಹುಶಃ ಕದನವೊಂದರಲ್ಲಿ ವೀರನೊಬ್ಬ ಮರಣಹೊಂದಿದ ಸಂಗತಿಯನ್ನು ತಿಳಿಸುತ್ತದೆ ಆತನ ಶೌರ್ಯಕ್ಕೆ ಅರಿರಾಯವಿಭಾಡ ಹಾಗೂ ಭಾಷೆಗೆ ತಪ್ಪುವರಾಯರಗಂಡ ಎಂದು ವರ್ಣಿತನಾಗಿರುವ ಅರಸನೊಬ್ಬನ ಮೆಚ್ಚಿಕೆ ದೊರೆಯಿತು ಅರಸನ ಹೆಸರು ನಷ್ಟವಾಗಿದೆ ಶಾಸನದಲ್ಲಿ ಕೊಟ್ಟಿರುವ ತೇದಿ ವಿವರಗಳನ್ನು ಕ್ರಿ ಶ ೧೫೦೬ರ ಸೆಪ್ಟೆಂಬರ್ ೧೬ಕ್ಕೆ ಹೊಂದಿಸಬಹುದು ಈ ಕಾಲದಲ್ಲಿ ನರಸನಾಯಕನ ಮಗನಾದ ವೀರನರಸಿಂಹ ರಾಜ್ಯವಾಳುತ್ತಿದ್ದ ಶಾಸನ ಅವನ ಕಾಲದ್ದಿರಬಹುದು

ಭಂಡಿಗೆರೆಯ ಶಾಸನವು (ಚಾ ನ ೨೩೩) ಕ್ರಿ ಶ ೧೫೧೩ಕ್ಕೆ ಸೇರಿದ್ದು, ಕೃಷ್ಣರಾಯನ ಶಾಸನಗಳಲ್ಲಿ ಪ್ರಾಚೀನತಮವಾದುದು ಇದು ಅರಸನನ್ನು ಶ್ರೀಮನ್ಮಹಾಕೃಷ್ಣರಾಯ ಎಂದು ಉಲ್ಲೇಖಿಸುತ್ತದೆ ಅವನ ಮಹಾ ಪ್ರಧಾನನ ಹೆಸರು ಉಳಿದುಬಂದಿಲ್ಲ ಮಹಾಪ್ರಧಾನ ಸಾಳುವ ತಿಮ್ಮರಸನ ತಮ್ಮ ಸಾಳುವ ಗೋವಿಂದರಾಜಯ್ಯನು ತಗಪೂರು ಗ್ರಾಮವನ್ನು ದತ್ತಿಬಿಟ್ಟುದನ್ನು ಕ್ರಿ ಶ ೧೫೧೪ರ ತಗರಪುರ ಶಾಸನವು (ಕೊ ಗಾ ೧೧) ತಿಳಿಸುತ್ತದೆ ಸೋಮೇಶ್ವರಾಚಾರ್ಯ ಅಥವಾ ಮಲ್ಲಿಕಾರ್ಜುನನ ನೊಮ್ಮಗ ಮತ್ತು ಬಾಲೊಡೆಯ ಅಥವಾ ಬಾಲನಾಥನ ಮಗ ಸೋಮಯದೇವವೊಡೆಯನು ದಾನವನ್ನು ಸ್ವೀಕರಿಸಿದವನೆಂದು ಹೇಳಲಾಗಿದ ಸೋಮೇಶ್ವರಾಚಾರ್ಯ ಅಥವಾ ಮಲ್ಲಿಕಾರ್ಜುನನು ಓರುಂಗಲ್ಲಿನ ಅರಸ ವೀರರುದ್ರನ ಗುರುವೆಂಬುದಾಗಿಯೂ ತಿಳಿಸಿದೆ ಈ ಅರಸನನ್ನು ಗುರುತಿಸುವುದು

---

[1] ಎ ಕ III (1974) ಗು ಪೇ 78

[2] ಎ ಕ IV (ರೈಸರ ಆವೃತ್ತಿ) Introduction p 24

[3] ಯಳಂ ೧೫೫ ಮತ್ತು ೧೬೦ನೆಯ ಶಾಸನಗಳೆರಡರಲ್ಲಿಯೂ ರೈಸ್ ಹಾಗೆಯೇ ಓದಿದ್ದರು ಯಳಂ ೧೫೫ರ ಮೂಲವನ್ನು ನಾವು ಪರಿಶೀಲಿಸಿದ್ದೇವೆ ಆದರೆ ಯಳಂ ೧೬೦ನೆಯ ಶಾಸನವಿರುವ ಕಲ್ಲು ನಮಗೆ ದೊರೆಯಲಿಲ್ಲ

ಹರಿಹರನ ತಂದೆ ಸಂಗಮನು ಬುಕ್ಕ ಭೂಪಾಲನ ಮಗನೆಂದು ಶಾಸನ ತಿಳಿಸುತ್ತದೆ ಕಂಪನೆಂಬುವನು ಇಮ್ಮಡಿ ಹರಿಹರನ ಮಂತ್ರಿಯಾಗಿದ್ದ, ಈ ಕಂಪಮಂತ್ರಿಯ ಕೈಕೆಳಗಿನ ಅಧಿಕಾರಿಯಾದ ಬಲ್ಲಪ್ಪ ಹದಿನಾಡನ್ನು ಪಾಲಿಸುತ್ತಿದ್ದ

ಮದ್ದೂರಿನ ಯಳಂ ೪೩ನೆಯ ಶಾಸನದ ಕಾಲ ಕ್ರಿ ಶ ೧೩೮೧ರ ಜನವರಿ ೬ ಉಪೇಂದ್ರಪುರವೆಂಬ ಹೆಸರನ್ನು ಹೊಂದಿದ್ದ ಆ ಗ್ರಾಮದ ಮಹಾಜನರು ಮತ್ತಿತರ ಅಧಿಕಾರಿಗಳು ದೇಶಿನಾಥದೇವರ ನೇವಾದಿಗಳಿಗೆ ದತ್ತಿ ನೀಡಿದುದನ್ನು ಈ ಶಾಸನ ನಿರೂಪಿಸುತ್ತದೆ ಅದೇ ಗ್ರಾಮದಲ್ಲಿರುವ ದೇಶೇಶ್ವರ (ದೇಶಿನಾಥ) ದೇವಾಲಯದ ಅಧಿಷ್ಠಾನದ ಮೇಲೆ ಕಂಡರಿಸಿರುವ ಯಳಂ ೪೧ನೆಯ ಶಾಸನ ಮೇಲಿನ ಶಾಸನದ ಕಾಲಕ್ಕಿಂತ ೫ ದಿನಗಳ ನಂತರದ್ದು (ಜನವರಿ ೧೧) ಮೂಲ ದತ್ತಿಯ ಜೊತೆಗೆ ಇತರ ಭೂದಾನಗಳನ್ನು ನೀಡಿದ ಸಂಗತಿಯನ್ನು ಇದು ನಿರೂಪಿಸುತ್ತದೆ ಇಲ್ಲಿ ಮೂಲದತ್ತಿ ಎಂದರೆ ಐದು ದಿನಗಳ ಹಿಂದೆ ನೀಡಿದ್ದ ದತ್ತಿಯೇ ಈ ಎರಡೂ ದತ್ತಿಗಳನ್ನು ನೀಡಿದುದು ಒಬ್ಬನೇ ಆದರೆ ಯಳಂ ೪೧ನೆಯ ಶಾಸನವು ಅರಸನನ್ನು ವೀರಬುಕ್ಕರಾಯಮಹಾರಾಯ ಎಂಬುದಾಗಿ ಉಲ್ಲೇಖಿಸುತ್ತದೆ ಇದು ತಪ್ಪೆಂಬುದು ಸ್ಪಷ್ಟ ಕ್ರಿ ಶ ೧೪೦೪ರ ವರೆಗೂ ಇಮ್ಮಡಿ ಹರಿಹರ ಆಳುತ್ತಿದ್ದನೆಂಬುದು ನಮಗೆ ತಿಳಿದಿದೆ ಇವನ ಮಗನಾದ ಇಮ್ಮಡಿ ಬುಕ್ಕ ದಕ್ಷಿಣ ಕರ್ನಾಟಕದ ಪೂರ್ವಪ್ರದೇಶ ಹಾಗೂ ಅದಕ್ಕೆ ಸೇರಿದ ಚೆಂಗಲಪೇಟೆ ಮತ್ತು ಆರ್ಕಾಟ್ ಜಿಲ್ಲೆಗಳನ್ನೊಳಗೊಂಡ ಪ್ರದೇಶ ವನ್ನು ಪಾಲಿಸುತ್ತಿದ್ದನೆಂಬುದಾಗಿ ತಿಳಿದುಬರುತ್ತದೆ ಅರಸನನ್ನು ಹೆಸರಿಸುವ ಬದಲಾಗಿ ಈ ಪ್ರದೇಶದ ರಾಜ್ಯಪಾಲನಾದ ಇಮ್ಮಡಿ ಬುಕ್ಕನ ಹೆಸರನ್ನು ಪ್ರಸ್ತುತ ಶಾಸನವು ಉಲ್ಲೇಖಿಸಿರಬಹುದಾದ ಸಾಧ್ಯತೆ ಇದೆ ವೀರ ಹರಿಯಪ್ಪ ಒಡೆಯನನ್ನು ಉಲ್ಲೇಖಿಸುವ ಚಾ ನ ೧೦೬ನ್ನು ಇಮ್ಮಡಿ ಹರಿಹರನ ಆಳ್ವಿಕೆಯಲ್ಲಿ ಕ್ರಿ ಶ ೧೩೮೬–೮೬ಕ್ಕೆ ಸೇರಿಸಿದೆ ಈ ಹೆಸರುಳ್ಳ ಯಾವುದೇ ಅರಸ ೬೦ ವರ್ಷಗಳ ಮೊದಲು ಎಂದರೆ ೧೩೨೬–೨೬ರಲ್ಲಾಗಲೀ ೬೦ ವರ್ಷಗಳ ಅನಂತರ ಎಂದರೆ ೧೪೪೬–೪೬ರಲ್ಲಾಗಲೀ ಅಧಿಕಾರದಲ್ಲಿರಲಿಲ್ಲ ಕ್ರಿ ಶ ೧೩೯೬ಕ್ಕೆ ಸೇರುವ ಚಾ ನ ೨೬೧ನೆಯ ಶಾಸನದಲ್ಲಿ ಹೊಯ್ಸಳ ದೇಶವನ್ನು ಪಾಲಿಸುತ್ತಿದ್ದ ಅಚಣ್ಣವೊಡೆಯನನ್ನು ಮಹಾಪ್ರಧಾನ ಮಗಪ್ಪದಣ್ಣಾಯಕರ 'ಬಲದಕಯ್ಯಭಂಡಾರ'ನೆಂದು ವರ್ಣಿಸಲಾಗಿದೆ ೧೩೬೮ರಲ್ಲಿ ಈ ಪ್ರದೇಶವನ್ನು ಮಹಾಪ್ರಧಾನ ಬಸವಯ್ಯದಣ್ಣಾಯಕನ ಕೈಕೆಳಗೆ ಅಧಿಕಾರಿಯಾಗಿದ್ದ ಗಣಪತಿಯನು ಪಾಲಿಸುತ್ತಿದ್ದನೆಂಬುದನ್ನು ಮೇಲೆ ಗಮನಿಸಿದ್ದೇವೆ ಈ ಪ್ರದೇಶದ ಆಡಳಿತ ನಿರ್ವಹಣೆಯ ಸಂಬಂಧದಲ್ಲಿ ಅಧಿಕಾರಿಗಳು ಈ ಮೂರು ದಶಕಗಳಲ್ಲಿ ಬದಲಾದರೆಂಬುದು ಸ್ಪಷ್ಟ ಕ್ರಿ ಶ ೧೩೯೮ರ ಪಿ ಪ ೮೮ನೆಯ ಶಾಸನದಲ್ಲಿ ಲಕ್ಕಣ್ಣವೊಡೆಯನೆಂಬ ಅರಸನ ಇನ್ನೊಬ್ಬ ಅಧಿಕಾರಿಯು ಕಂಡುಬರುತ್ತಾನೆ ಯಳಂ ೧೬೪ನೆಯ ತಮಿಳು ಶಾಸನವು ಹರಿಹರನ ಆಳ್ವಿಕೆಯನ್ನು ಉಲ್ಲೇಖಿಸುವಂತೆ ತೋರುತ್ತದೆ ಲಿಪಿಯ ಆಧಾರದ ಮೇಲೆ ಈ ಶಾಸನವನ್ನು ಇಮ್ಮಡಿ ಹರಿಹರನ ಕಾಲದ್ದೆಂದು ಹೇಳಬಹುದು

ಕ್ರಿ ಶ ೧೪೦೮ಕ್ಕೆ ಸೇರುವ ಒಂದನೇ ದೇವರಾಯನ ಸಿಂಗನಲ್ಲೂರ ಶಾಸನವು (ಕೊ ಗಾ ೫೬) ಅವನನ್ನು ಸಂಗೀತ ವಿದ್ಯಾಸಾಗರ ಮತ್ತು ಸಾಹಿತ್ಯವಿದ್ಯಾಕಲಾವಿಶಾಲಾವತಾರ ಎಂಬುದಾಗಿ ವರ್ಣಿಸುತ್ತದೆ ಹಳಿಹಿರಿಯೂರು ಗ್ರಾಮದಲ್ಲಿ ನೆಲಸಬೇಕಾಗಿದ್ದ ಒಕ್ಕಲುಗಳಿಗೆ ವಿಧಿಸಲಾದ ಕಟ್ಟುಕಟ್ಟಳೆಗಳನ್ನು ತಿಳಿಸುವ ಈ ಶಾಸನ ಕುತೂಹಲಕರವಾದುದು ಇದನ್ನು ರೂಪಿಸಿದವರು ಹದಿನೆಂಟು ಸಮಯದವರು ಒಕ್ಕಲುಗಳು ತಾವು ಕೊಡಬೇಕಾದ ತೆರಿಗೆ, ಸುಂಕ, ಇತ್ಯಾದಿಗಳನ್ನು ತಪ್ಪದೆ ಕೊಡಲು ಒಪ್ಪಿದರೆನ್ನಲಾಗಿದೆ ನಡೆವಳಿಕಾಋಪ್ರಭುಗಳು ದಂಡ, ತಪ್ಪು, ತಗುದಿ ಮುಂತಾದವುಗಳನ್ನು ಸಂಗ್ರಹಿಸು ವಂತಿಲ್ಲವೆಂದು ಶಾಸನದಲ್ಲಿ ವಿಧಿಸಿದೆ ಒಂದು ವೇಳೆ ಒಕ್ಕಲು ಓಡಿಹೋದಲ್ಲಿ, ಊರು, ಗವುಡ ಹಾಗೂ ಒಕ್ಕಲನಾಳ್ವ ವ್ಯಕ್ತಿ ದಂಡ ಇತ್ಯಾದಿಗಳನ್ನು ತೆರಬೇಕೆಂದು ಹೇಳಿದೆ ಒಂದು ವೇಳೆ ಒಕ್ಕಲುಗಳೊಂದಿಗೆ ಊರು ಸಹ ತಪ್ಪಿಸಿಕೊಂಡಲ್ಲಿ ಗವುಡು ಗಳನ್ನು ಹೊಣೆಗಾರರೆಂದು ಭಾವಿಸುವಂತಿಲ್ಲ ಒಂದು ವೇಳೆ ಒಕ್ಕಲು ಸತ್ತುಹೋದರೆ ಆಸ್ತಿಯನ್ನು, ತಂದೆಯ ಆಸ್ತಿ (ಒಡವೆ) ಮಗನಿಗೆ, ಅಣ್ಣನದು ತಮ್ಮನಿಗೆ, ತಮ್ಮನದು ಅಣ್ಣನಿಗೆ, ಹಂಚಬೇಕೆಂದು ಹೇಳಿದೆ ಹಾಗೆ ಆಸ್ತಿಯನ್ನು ಪಡೆದವನು ವರ್ಷಂಪ್ರತಿ ಅರಮನೆಗೆ ಸಿದ್ಧಾಯವನ್ನು ತೆರಬೇಕೆಂದು ಸಹ ಹೇಳಿದೆ ಶಾಸನ ಕೊಡುವ ಇತರ ವಿವರಗಳು ಸ್ಪಷ್ಟವಾಗಿಲ್ಲ

ಚಾ ನ ೩೫೫ ಹಾಗೂ ೩೬೨ ಇವೆರಡೂ ಶಾಸನಗಳ ಕಾಲ ಕ್ರಿ ಶ ೧೪೨೨ ಆಗಸ್ಟ್ ೨ ಮೊದಲನೆಯ ಶಾಸನ ವನ್ನು ಕಲ್ಲಿನ ಮೇಲೆ ಕಂಡರಿಸಿದ್ದು, ಎರಡನೆಯದನ್ನು ಮೂರು ತಾಮ್ರದ ಹಲಗೆಗಳ ಮೇಲೆ ಕಂಡರಿಸಿದೆ ಇವೆರಡೂ ಶಾಸನಗಳು ಒಂದನೇ ದೇವರಾಯನ ಮಗ ಹರಿಹರರಾಯವೊಡೆಯನು ಕನಕಗಿರಿಯ ವಿಜಯ(ವಿಜಯನಾಥ)ದೇವರಿಗೆ ಮಲೆಯೂರು ಮತ್ತು ಅದರ ಉಪಗ್ರಾಮಗಳನ್ನೂ ಕೆಲವಾರು ಸುಂಕಾದಾಯಗಳನ್ನೂ ದಾನಮಾಡಿದುದನ್ನು ನಿರೂಪಿಸು ತ್ತದೆ ಕೊಲಗಣದ ವಾಸುದೇವರಿಗೆ ಪೂರ್ವದಲ್ಲಿ ನೀಡಿದ್ದ ಮಲೆಯೂರಿನಲ್ಲಿಯ ಭೂಮಿಕಾಣಿಗಳನ್ನು ಹೊರತುಪಡಿಸಿ

ಉಳಿದುದನ್ನು ದಾನ ನೀಡಲಾಗಿದೆಯೆಂದು ಎರಡನೆಯ ಶಾಸನ ತಿಳಿಸುತ್ತದೆ ಸೋಮಹಳ್ಳಿ ತಾಮ್ರಶಾಸನವು[1] ಇದೇ ಕಾಲದ್ದೆಂಬುದನ್ನು ಇಲ್ಲಿ ಗಮನಿಸಬಹುದು ಹರಿಹರರಾಯನು '' ತಂಮ ತಂದೆ ದೇವರಾಯಮಹಾರಾಯರಿಗೆ ಶಾಶ್ವತ ಪುಂಣ್ಯಲೋಕಪ್ರಾಪ್ತ್ಯರ್ಥ ''ವಾಗಿ ದತ್ತಿ ನೀಡಿದನೆಂದು ಅಲ್ಲಿ ಹೇಳಿರುವುದನ್ನು ಹಿಂದೆಯೇ ಗಮನಿಸಿದ್ದೇವೆ ಮೇಲಿನ ಹೇಳಿಕೆ ಒಂದನೇ ದೇವರಾಯನು ಆ ವೇಳೆಗೆ ಮರಣಹೊಂದಿರಬೇಕೆಂಬ ಊಹೆಗೆ ಎಡೆಮಾಡಿಕೊಟ್ಟಿದೆ ಆದರೆ, ಮೇಲೆ ಪರಿಶೀಲಿಸಿದ ಇವೆರಡೂ ಶಾಸನಗಳು ಅಂಥ ವಿಷಯವನ್ನೇನೂ ಉಲ್ಲೇಖಿಸುವುದಿಲ್ಲ

ವೀರದೇವರಾಯವೊಡೆಯನ ಆಳ್ವಿಕೆಯ ಕಾಲದ ಸು ೧೫ನೆಯ ಶತಮಾನದ ಲಿಪಿಯಲ್ಲಿರುವ ಹರಪನಹಳ್ಳಿ ಶಾಸನದಲ್ಲಿ (ಚಾ ನ ೨೬೫) ವಿಶ್ವಾವಸು ಸಂವತ್ಸರದ ಮಾರ್ಗಶಿರ ಶು ೫ ಎಂಬಷ್ಟು ಮಾತ್ರ ತೇದಿಯ ವಿವರಗಳನ್ನು ಕೊಟ್ಟಿದೆ ಈ ವಿವರಗಳು ಇಮ್ಮಡಿ ದೇವರಾಯನ ಆಳ್ವಿಕೆಯಲ್ಲಿ ಕ್ರಿ ಶ ೧೪೨೫ರ ನವೆಂಬರ್ ೧೫ಕ್ಕೆ ಹೊಂದುತ್ತವೆ ಶಾಸನವನ್ನು ಅವನ ಆಳ್ವಿಕೆಗೆ ಸೇರಿಸಬಹುದಾಗಿದೆ ಅವನ ಕೈಕೆಳಗೆ ಅಧಿಕಾರಿಯಾಗಿದ್ದ ಹರಿಯಪ್ಪದಣ್ಣಾಯಕನನ್ನೂ ಈ ಸವೆದುಹೋಗಿರುವ ಶಾಸನ ಉಲ್ಲೇಖಿಸುತ್ತದೆ ಕ್ರಿ ಶ ೧೪೨೮ರ ಪುಣಜೂರು ಶಾಸನವು (ಚಾ ನ ೨೮೦) ದೇವದಣ್ಣಾಯಕನೆಂಬ ಇನ್ನೊಬ್ಬ ಅಧಿಕಾರಿಯನ್ನು ಹೆಸರಿಸುತ್ತದೆ ಮಾಂಬಳ್ಳಿಯ ಶಾಸನದಲ್ಲಿ (ಯಳಂ ೧೬೦) ಉಲ್ಲೇಖಿತವಾಗಿರುವ ಹರಿಹರನಾಥ ಎಂಬುದು ಅರಸನ ಹೆಸರೇ ಅಥವಾ ದೇವರನ್ನು ಸೂಚಿಸುತ್ತದೆಯೆ ಎಂಬುದನ್ನು ನಿರ್ಧರಿಸಲು ರೈಸ್‌ರವರಿಗೆ ಸಾಧ್ಯವಾಗಿರಲಿಲ್ಲ ಮಾಂಬಳ್ಳಿಯಲ್ಲಿ ಕಂಡುಬರುವ ಇತರ ಶಾಸನಗಳಿಂದ ಈ ಸ್ಥಳವನ್ನು ಹರಿಹರನಾಥಪಟ್ಟಣವೆಂದು ಕರೆಯಲಾಗುತ್ತಿತ್ತೆಂದು ತಿಳಿದುಬರುತ್ತದೆ ಕ್ರಿ ಶ ೧೩೯೯ರ ಯಳಂ ೧೫೫ನೆಯ ಶಾಸನವು ಈ ಸ್ಥಳದ ದೇವತೆಯನ್ನು 'ಮಾಂಬಳ್ಳಿಯಾದ ಹರಿಹರನಾಥಪಟ್ಟಣದ ಶ್ರೀ ವೈದ್ಯನಾಥದೇವ' ಎಂದು ಉಲ್ಲೇಖಿಸುತ್ತದೆ[2] 'ಮಾಂಬಳ್ಳಿಯಾದ ಹರಿಹರನಾಥನ ಪಟ್ಟಣದ' ಎಂಬ ಮೂಲ ಪಾಠಕ್ಕೆ ಬದಲಾಗಿ ಯಳಂ ೧೬೦ರಲ್ಲಿ 'ಮಾಂಬಳ್ಳಿಯಾದ ಹರಿಹರನಾಥನ ಮಜ್ಜಣದ'[3] ಎಂದಿರುವುದು ತಪ್ಪೆಂದು ತೋರುತ್ತದೆ ಇದರಿಂದಾಗಿ ಹರಿಹರನಾಥ ಎಂಬುದು ದೇವತೆಯ ಅಥವಾ ಅರಸನ ಹೆಸರಾಗಿರದೆ ಊರೊಂದರ ಹೆಸರಾಗುತ್ತದೆ 'ಮಜ್ಜಣದ ಸ್ಥಳ'ವೂ ಅದಲ್ಲ

ಕ್ರಿ ಶ ೧೪೫೩ರ ಒಂದು ಶಾಸನ ಮಾತ್ರ (ಪಿ ಪ ೩೨) ಮಲ್ಲಿಕಾರ್ಜುನನ ಕಾಲದ್ದೆಂದು ಹೇಳಬಹುದಾಗಿದೆ ಈ ಶಾಸನ ಅವನ ಆಳ್ವಿಕೆಯನ್ನು ನೇರವಾಗಿ ಉಲ್ಲೇಖಿಸುವುದಿಲ್ಲ ಆದರೆ ಈ ಕಾಲದಲ್ಲಿ ಅರಸನಾಗಿದ್ದ ಮಲ್ಲಿಕಾರ್ಜುನರಾಯನಿಗೆ ಧರ್ಮವಾಗಬೇಕೆಂದು ಹಂಪರಸನೆಂಬ ಸುಂಕಾಧಿಕಾರಿಯು ಶ್ರೀಗಿರಿಕುಡಕೂರ ಅನ್ನದಾನಿ ಮಲ್ಲಿಕಾರ್ಜುನದೇವರಿಗೆ ಹಲವು ತೆರಿಗೆಗಳಿಂದ ಬಂದ ಆದಾಯವನ್ನು ದಾನ ನೀಡಿದನೆಂದು ನಿರೂಪಿಸುತ್ತದೆ

ಪಿರಿಯಾಪಟ್ಟಣದ ಶಾಸನವು (ಪಿ ಪ ೩) ಬಹುಶಃ ಕದನವೊಂದರಲ್ಲಿ ವೀರನೊಬ್ಬ ಮರಣಹೊಂದಿದ ಸಂಗತಿಯನ್ನು ತಿಳಿಸುತ್ತದೆ ಆತನ ಶೌರ್ಯಕ್ಕೆ ಅರಿರಾಯವಿಭಾಡ ಹಾಗೂ ಭಾಷೆಗೆ ತಪ್ಪುವರಾಯರಗಂಡ ಎಂದು ವರ್ಣಿತನಾಗಿರುವ ಅರಸನೊಬ್ಬನ ಮೆಚ್ಚಿಕೆ ದೊರೆಯಿತು ಅರಸನ ಹೆಸರು ನಷ್ಟವಾಗಿದೆ ಶಾಸನದಲ್ಲಿ ಕೊಟ್ಟಿರುವ ತೇದಿ ವಿವರಗಳನ್ನು ಕ್ರಿ ಶ ೧೫೦೭ರ ನೆವೆಂಬರ್ ೧೭ಕ್ಕೆ ಹೊಂದಿಸಬಹುದು ಈ ಕಾಲದಲ್ಲಿ ನರಸನಾಯಕನ ಮಗನಾದ ವೀರನರಸಿಂಹ ರಾಜ್ಯವಾಳುತ್ತಿದ್ದ ಶಾಸನ ಅವನ ಕಾಲದ್ದಿರಬಹುದು

ಭಂಡಿಗೆರೆಯ ಶಾಸನವು (ಚಾ ನ ೨೩೩) ಕ್ರಿ ಶ ೧೫೧೩ಕ್ಕೆ ಸೇರಿದ್ದು, ಕೃಷ್ಣರಾಯನ ಶಾಸನಗಳಲ್ಲಿ ಪ್ರಾಚೀನತಮವಾದುದು ಇದು ಅರಸನನ್ನು ಶ್ರೀಮನ್ಮಹಾಕೃಷ್ಣರಾಯ ಎಂದು ಉಲ್ಲೇಖಿಸುತ್ತದೆ ಅವನ ಮಹಾಪ್ರಧಾನನ ಹೆಸರು ಉಳಿದುಬಂದಿಲ್ಲ ಮಹಾಪ್ರಧಾನ ಸಾಳುವ ತಿಮ್ಮರಸನ ತಮ್ಮ ಸಾಳುವ ಗೋವಿಂದರಾಜಯ್ಯನು ತಗವೂರು ಗ್ರಾಮವನ್ನು ದತ್ತಿಬಿಟ್ಟುದನ್ನು ಕ್ರಿ ಶ ೧೫೧೪ರ ತಗರಪುರ ಶಾಸನವು (ಕೊ ಗಾ ೧೧) ತಿಳಿಸುತ್ತದೆ ಸೋಮೇಶ್ವರಾಚಾರ್ಯ ಅಥವಾ ಮಲ್ಲಿಕಾರ್ಜುನನ ಮೊಮ್ಮಗ ಮತ್ತು ಬಾಲೊಡೆಯ ಅಥವಾ ಬಾಲನಾಥನ ಮಗ ಸೋಮಯದೇವವೊಡೆಯನು ದಾನವನ್ನು ಸ್ವೀಕರಿಸಿದವನೆಂದು ಹೇಳಲಾಗಿದೆ ಸೋಮೇಶ್ವರಾಚಾರ್ಯ ಅಥವಾ ಮಲ್ಲಿಕಾರ್ಜುನನು ಓರುಂಗಲ್ಲಿನ ಅರಸ ವೀರರುದ್ರನ ಗುರುವೆಂಬುದಾಗಿಯೂ ತಿಳಿಸಿದೆ ಈ ಅರಸನನ್ನು ಗುರುತಿಸುವುದು

[1] ಎ ಕ III (1974) ಗು ಪೇ 78

[2] ಎ ಕ IV (ರೈಸರ ಆವೃತ್ತಿ) Introduction p 24

[3] ಯಳಂ ೧೫೫ ಮತ್ತು ೧೬೦ನೆಯ ಶಾಸನಗಳೆರಡರಲ್ಲಿಯೂ ರೈಸ್ ಹಾಗೆಯೇ ಓದಿದ್ದರು ಯಳಂ ೧೫೫ರ ಮೂಲವನ್ನು ನಾವು ಪರಿಶೀಲಿಸಿದ್ದೇವೆ ಆದರೆ ಯಳಂ ೧೬೦ನೆಯ ಶಾಸನವಿರುವ ಕಲ್ಲು ನಮಗೆ ದೊರೆಯಲಿಲ್ಲ

ಕಷ್ಟ ಓರುಂಗಲ್ಲಿನ ಕೊನೆಯ ಪ್ರಮುಖ ದೊರೆಯೆಂದರೆ ಕಾಕತೀಯವಂಶದ ಪ್ರತಾಪರುದ್ರ ಆದರೆ ಅವನ ಆಳ್ವಿಕೆ ಸುಮಾರು ಕ್ರಿ ಶ ೧೩೨೩ರಲ್ಲಿ ಎಂದರೆ ಹೆಚ್ಚುಕಡಿಮೆ ಎರಡು ಶತಮಾನಗಳ ಹಿಂದೆಯೇ ಕೊನೆಗೊಂಡಿತ್ತು ಒಂದು ವೇಳೆ ಮೇಲಿನ ಶಾಸನೋಕ್ತರಾದ ಮೂರು ತಲೆಮಾರಿನ ಗುರುಗಳಲ್ಲಿ ಪ್ರತಿಯೊಬ್ಬರಿಗೂ ತಲಾ ೫೦ ವರ್ಷಗಳ ಕಾಲವನ್ನು ನಿಗದಿ ಮಾಡಿದರೂ ಮಲ್ಲಿಕಾರ್ಜುನ ಅಥವಾ ಸೋಮೇಶ್ವರಾಚಾರ್ಯನ ಕಾಲವನ್ನು ೧೪ನೆಯ ಶತಮಾನದ ಮಧ್ಯಭಾಗದವರೆಗೆ ಮಾತ್ರವೇ ಹಿಂದೂಡಬಹುದಷ್ಟೆ ಈ ಸಂದರ್ಭದಲ್ಲಿ ತನಯ ಅಥವಾ ತನೂಭವ ಎಂದರೆ ಶಿಷ್ಯ ಎಂದು ಭಾವಿಸಬಹುದು ಇಲ್ಲಿ ಕೆಲವು ತಲೆಮಾರುಗಳನ್ನು ಬಿಟ್ಟಿರಬೇಕು ಆಗಲೂ ಸೋಮೇಶ್ವರ ಅಥವಾ ಮಲ್ಲಿಕಾರ್ಜುನ ಎಂಬ ಹೆಸರಿನ ಯಾವೊಬ್ಬ ಗುರುವೂ ಈ ಕಾಕತೀಯ ಅರಸನಿಗಿದ್ದಂತೆ ನಮಗೆ ತಿಳಿದುಬಂದಿಲ್ಲ ಹಾಗೆಯೇ ವೀರಶೈವ ಗುರು ಬಸವೇಶ್ವರನ ಸಮಕಾಲೀನ ಮಲ್ಲಿಕಾರ್ಜುನಪಂಡಿತನ ಜೀವನಚರಿತ್ರೆಯನ್ನು 'ಪಂಡಿತಾರಾಧ್ಯ ಚರಿತ್ರ' ಎಂಬ ಹೆಸರಿನಲ್ಲಿ ಬರೆದ ಪಾಲ್ಕುರಿಕೆ ಸೋಮನಾಥನನ್ನು ಈ ಸೋಮನಾಥ ಎಂಬ ಹೆಸರು ಸೂಚಿಸುತ್ತದೆಯೇ ಎಂಬುದನ್ನೂ ಖಚಿತವಾಗಿ ಹೇಳಲು ಸಾಧ್ಯವಿಲ್ಲ ಅರಸನಾದ ಕೃಷ್ಣದೇವರಾಯನನ್ನು ನಾರಸಿಂಹವರ್ಮಮಹಾರಾಜನ ಮಗ ಮತ್ತು ಕರಾಳಿ ಸಾಳುವ ಎಂಬ ಬಿರುದನ್ನು ಧರಿಸಿದ ಕೃಷ್ಣವರ್ಮಮಹಾಧಿರಾಯನೆಂಬುದಾಗಿ ಇಲ್ಲಿ ಉಲ್ಲೇಖಿಸಲಾಗಿದೆ ಇದು ಸರಿಯಲ್ಲ

ಚಾ ನ ೧೬೨ನೆಯ ಶಾಸನ ಆಳರಸನನ್ನು ಹೆಸರಿಸುವುದಿಲ್ಲವಾದರೂ ಕೃಷ್ಣದೇವರಾಯನ ಪ್ರಸಿದ್ಧಮಂತ್ರಿಯಾದ ಸಾಳುವ ಗೋವಿಂದರಾಜಯ್ಯನನ್ನು ಉಲ್ಲೇಖಿಸುತ್ತದೆಯಾದ್ದರಿಂದ ಇದು ಕೃಷ್ಣದೇವರಾಯನ ಶಾಸನವೆನ್ನಬಹುದು ಈ ಶಾಸನದ ಕಾಲವನ್ನು ಕ್ರಿ ಶ ೧೫೧೫, ಡಿಸೆಂಬರ್ ೧೦ಕ್ಕೆ ಹೊಂದಿಸಬಹುದಾಗಿದ ಶಾಸನವು ಸ್ವಾರಸ್ಯಕರವಾದ ಆಡಳಿತ ವ್ಯವಹಾರವನ್ನು ಕುರಿತು ತಿಳಿಸುತ್ತದೆ ದೊಡ್ಡಣ್ಣಸೆಟ್ಟಿ ಎಂಬುವನಿಗೆ ಸೇರಿದ ಹತ್ತು ಅಂಕಣದ ಗೃಹನಿವೇಶನವನ್ನು ಅರಮನೆಗೆ ತೆಗೆದುಕೊಂಡು ಪ್ರತಿಯಾಗಿ ಅವನಿಗೆ ಅದೇ ಅಳತೆಯ ಬೇರೆ ನಿವೇಶನವನ್ನು ನೀಡಲಾಯಿತು ಆದರೆ ಆತನಿಗೆ ನೀಡಿದ ನಿವೇಶನವು ನಂಜೇದೇವ ಎಂಬುವನಿಗೆ ಸೇರಿದುದಾಗಿದ್ದು ಆತ ಕುಳನ್ನೆಯನ್ನು (ತೆಂಗೆ?) ತೆರಲಾರದ ಪರಿಸ್ಥಿತಿಯಲ್ಲಿದ್ದುದರಿಂದ ಅರಮನೆಗೆ ಒಪ್ಪಿಸಿದ್ದಂತೆ ತೋರುತ್ತದೆ ಈ ಸಂಬಂಧದಲ್ಲಿ ನಂಜೇದೇವನು ಅರಮನೆಗೆ ಕೆಂಪೊತ್ತಿದ ವೋಲೆಯನ್ನು ನೀಡಿದನೆಂದು ಹೇಳಿದೆ ಇದು ಪ್ರಾಯಶಃ ಆಸ್ತಿಪತ್ರವಾಗಿರಬಹುದು

ಕಿ ಶ ೧೫೨೨ಕ್ಕೆ ಸೇರುವ ಕೊ ಗಾ ೮೨ನೆಯ ಶಾಸನದಿಂದ ರಾಜರಾಜನ ಮಗನಾದ ಸಾಳುವ ಗೋವಿಂದರಾಜನಿಗೆ ಉಮ್ಮತ್ತೂರ ನಾಯಕತನವನ್ನು ಒಪ್ಪಿಸಲಾಗಿತ್ತೆಂದು ತಿಳಿದುಬರುತ್ತದೆ ಅರಸನ ಮಹಾಪ್ರಧಾನ ತಿಮ್ಮರಸ ಹಾಗೂ ಗೋವಿಂದರಾಜರ ತಂದೆಯಾದ ರಾಚಯ್ಯನೇ ಪ್ರಾಯಶಃ ಈ ರಾಜರಾಜನಿರಬಹುದು ಪ್ರಕೃತ ಶಾಸನದ ಪ್ರಕಾರ ಈ ಗೋವಿಂದರಾಜನು ತನ್ನ ನಾಯಕತನಕ್ಕೆ ಸಲ್ಲುವ ಹೊಸನಾಡಸ್ಥಳದ ಕಲಿಯುಗವಾಡಿಗ್ರಾಮವನ್ನು ತಿರುಮಕೂಡಲ ಕಾವೇರಿ ಹಾಗೂ ಕಪಿನೀ ನದಿಗಳಿಗೆ ಸೋಪಾನವನ್ನು (ಅಲರೆ ?) ಕಟ್ಟುವ ತಿರುಪಣಿ ಕೆಲಸಕ್ಕೆ ದಾನ ನೀಡಿದ

ಕ್ರಿ ಶ ೧೫೨೩ರ ಚಾ ನ ೨೨೪ರಲ್ಲಿ ಗೋವಿಂದರಾಜನ ಕೈಕೆಳಗೆ ಮಾಗಣಿಕಾರನಾಗಿದ್ದ ತುಜುಮುಡಿಪಾಕದ ತಿರುವೇಂಗಡಮುದಲಿಯಾರನ ಮಗ ಜಡೆಯಾರುಮುದಲಿಯಾರು ಹಟ್ಟಿಲಕೋಟೆಯಲ್ಲಿ ವೀರಭದ್ರದೇವರ ಪ್ರತಿಷ್ಠೆ ಮಾಡಿಸಿದುದನ್ನು ನಿರೂಪಿಸಲಾಗಿದೆ ದಾನ ನೀಡಿದ ಭೂಮಿಕಾಣಿಗಳನ್ನು ಆ ದೇವರ ಸ್ಥಾನಕ್ಕೆ ಕರ್ತನಾದ ಅಲ್ಲಪ್ಪನಿಗೆ ಸಲ್ಲಿಸಲಾಯಿತು ಮುಂದೆ ಮತ್ತಾರಾದರೂ ದಾನ ನೀಡಿದರೆ ಅದೂ ಅಲ್ಲಪ್ಪನಿಗೇ ಸಲ್ಲಬೇಕೆಂದೂ, ದೇವರಪೂಜೆಗೆ ತನಗಿಷ್ಟಬಂದವರನ್ನು ಅರ್ಚಕರನ್ನಾಗಿ ನೇಮಿಸಿಕೊಳ್ಳುವ ಪೂರ್ಣಾಧಿಕಾರ ಅವನಿಗುಂಟೆಂದೂ ಇವುಗಳ ಬಗ್ಗೆ ಪಾರುಪತ್ಯಗಾರನೂ ಪ್ರಶ್ನಿಸುವಂತಿಲ್ಲವೆಂದೂ ಹೇಳಿದೆ ದೇವಾಲಯದ ಶ್ರೀಕಾರ್ಯವನ್ನು ವೇಳೆವೇಳೆಗೆ ತಪ್ಪದೆ ನಡೆಸಿಕೊಂಡು ಬರಬೇಕೆಂಬುದು ಅತಿ ಮುಖ್ಯವಾದ ನಿಬಂಧನೆಯಾಗಿತ್ತು

ಚಾ ನ ೧೦೦ನೆಯ ಶಾಸನ ಉಮ್ಮತ್ತೂರಿನಲ್ಲಿದೆ ತ್ರುಟಿತವಾಗಿರುವ ಈ ಶಾಸನದ ಕಾಲ ಕ್ರಿ ಶ ೧೫೨೭ ಅರಸ ಕೃಷ್ಣರಾಯನಿಗೆ ಧರ್ಮಕೀರ್ತಿಯಾಗಬೇಕೆಂದು ಅವಸರದ ದೇಮರಸಯ್ಯನ ನಿರೂಪದ ಮೇರೆಗೆ ಲಕ್ಕರಾಜನ ಮಗ ತಿಮ್ಮರಾಜನು ದೇವಾಲಯವೊಂದರ ಗರ್ಭಗೃಹ, ಸುಕನಾಸಿ ಮತ್ತಿತರ ಭಾಗಗಳನ್ನು ಜೀರ್ಣೋದ್ಧಾರಗೊಳಿಸಿದುದನ್ನು ಇದು ನಿರೂಪಿಸುತ್ತದೆ ದೇವಾಲಯದ ಹೆಸರು ನಷ್ಟವಾಗಿದೆ ಈ ದೇಮರಸಯ್ಯನ ಉಲ್ಲೇಖ ಇತರ ಶಾಸನಗಳಲ್ಲೂ ಕಂಡುಬರುತ್ತದೆ ಈತನಿಗೆ ಉಮ್ಮತ್ತೂರ ಸೀಮೆಯ ನಾಯಕತನವನ್ನು ಅರಸನು ದಯಪಾಲಿಸಿದ್ದನೆಂದು ಚಾ ನ ೩೮೭ನೆಯ ಹೆಗ್ಗೊರಾರದ ಶಾಸನ ತಿಳಿಸುತ್ತದೆ ಅರಸನ ನಿರೂಪದ ಮೇರೆಗೆ, ಆ ಸೀಮೆಯ ತಗಡೂರ ಸ್ಥಳಕ್ಕೆ ಸಲ್ಲುವ ಹೆಗ್ಗೊರಾರ ಹಾಗೂ ಅದರ ಉಪಗ್ರಾಮವಾದ ಪುರಗಳನ್ನು ಸರ್ವಸ್ವಾಮ್ಯಸಹಿತವಾಗಿ ಬಮ್ಮಾಪುರದ ಬಾಲಕೃಷ್ಣದೇವರ

ಅಂಗರಂಗಭೋಗಾದಿ ಸೇವೆಗಳಿಗೆ ಕೆಲ ದಾನ ನೀಡಿದ ದಾನ ಮಾಡಿದುದು ತುಂಗಭದ್ರಾ ತೀರದ ಪಂಪಾಕ್ಷೇತ್ರದ ವಿರೂಪಾಕ್ಷೇಶ್ವರನ ಸನ್ನಿಧಿಯಲ್ಲಿ

ಕೃಷ್ಣರಾಯಮಹಾರಾಯನ ಕಾರ್ಯಕರ್ತನಾದ ಕೃಷ್ಣರಾಯನಾಯಕನು ಕೋಟೆಯೊಳಗಿನ ತುಂಗ ಸ್ಥಳಕ್ಕೆ ಸಲ್ಲುವ ನೆಟ್ಟಹಳ್ಳಿಗ್ರಾಮವನ್ನು ಮಹಾದೇವದೇವರಿಗೆ ದತ್ತಿಬಿಟ್ಟ ವಿಷಯವನ್ನು ಅದೇ ಗ್ರಾಮದ ಓ ಬ ೧೧೩ನೆಯ ಶಾಸನ ನಿರೂಪಿಸುತ್ತದೆ ಬಾಣಸಿಗ ವಿನಿಯೋಗವನ್ನು ಈ ದತ್ತಿಯು ಒಳಗೊಳ್ಳುತ್ತದೆಂದು ಹೇಳಿದೆ ಇದು ಬಹುಶಃ ದೇವಾಲಯದಲ್ಲಿ ನೇಮಕಗೊಂಡ ಬಾಣಸಿಗರಿಗೆ ನೈವೇದ್ಯದ ವಿತರಣೆಯನ್ನು ಸೂಚಿ ಸುತ್ತದೆ ಅರ್ಚಕರು ಬಾಣಸಿಗರು ಮುಂತಾದ ದೇವಾಲಯದ ಸಿಬ್ಬಂದಿವರ್ಗದವರಿಗೆ ದೇವರ ನೈವೇದ್ಯವನ್ನು ಹಂಚುವ ಪದ್ಧತಿ ಇಂದಿಗೂ ದಕ್ಷಿಣ ಭಾರತದ ದೇವಾಲಯಗಳಲ್ಲಿದೆ

ಕೊ ಗಾ ೮೩ನೆಯ ಹನೂರ ಶಾಸನ ಕುತೂಹಲಕರವಾಗಿದೆ ಇದರಲ್ಲಿ ಕೆಲವು ಗೌಡುಗಳು ವಿಜಯನಗರಕ್ಕೆ ಹೋಗಿ ಅಲ್ಲಿ ಅರಸ, ಸಾಳುವ ತಿಮ್ಮರಸ, ಗೋವಿಂದರಾಜಯ್ಯ ಮತ್ತಿತರರನ್ನು ಭೇಟಿಮಾಡಿದುದನ್ನು ಉಲ್ಲೇಖಿಸಲಾಗಿದೆ ತೋರುತ್ತದೆ ದುರ್ದೈವದಿಂದ ಈ ಶಾಸನ ಭಿನ್ನವಾಗಿದ್ದು ಅವರ ಭೇಟಿಯ ಉದ್ದೇಶವಾಗಲಿ ಅವರ ಪರಿಣಾಮವಾಗಲಿ ತಿಳಿದುಬರುವುದಿಲ್ಲ

ಅಚ್ಯುತರಾಯನ ಶಾಸನಗಳಲ್ಲಿ ಕ್ರಿ ಶ ೧೫೩೧ಕ್ಕೆ ಸೇರುವ ಜಾ ನ ೭೦೧ನೆಯ ನಂಜೇದೇವರಪುರದ ಶಾಸನವೇ ಪ್ರಾಚೀನತಮವಾದುದು ಅದು ಅರಸನನ್ನು ನೇರವಾಗಿ ಉಲ್ಲೇಖಿಸಿಲ್ಲ, ಆದರೆ ಅತನ ನಿರೂಪದ ಮೇರೆಗೆ ಪೆರುಮಾಳ ಅಧಿಕಾರಿಯ(?)ನು ಉಯಂಬಳಿಸ್ಥಳದ ದಣಾಯಕನಪುರ ಎಂಬ ಗ್ರಾಮವನ್ನು ದತ್ತಿ ಬಿಟ್ಟುದನ್ನು ತಿಳಿಸುತ್ತದೆ ಪೆರುಮಾಳ ಅಧಿಕಾರಿ ಚಲ್ಲಯ್ಯನಿಗೆ ಪುಣ್ಯವಾಗಬೇಕೆಂದು ಗಂಗನಾಯಕನ ಮಗ ದಳವಾಯಿ ರಂಗನಾಯಕನು ಉಮ್ಮತ್ತೂರ ರಂಗನಾಥದೇವರಿಗೆ ದತ್ತಿ ಬಿಟ್ಟ ಸಂಗತಿಯನ್ನು ಕ್ರಿ ಶ ೧೫೩೧ರ ಉಮ್ಮತ್ತೂರು ಗ್ರಾಮದ ಜಾ ನ ೮೯ ರಲ್ಲಿ ನಿರೂಪಿಸಿದೆ ಈ ಪೆರುಮಾಳ ಅಧಿಕಾರಿ ಚಲ್ಲಯ್ಯನು ಕೃಷ್ಣರಾಯಮಹಾರಾಯನ ಕಾರ್ಯಕರ್ತನೆಂದು ಇಲ್ಲಿ ಹೇಳಿದೆ ಆದರೆ ಶಾಸನದ ಕಾಲದ ಪ್ರಕಾರ ಅಚ್ಯುತರಾಯ ಆಳುತ್ತಿದ್ದನೆಂದಾಗುತ್ತದೆ ಮೇಲೆ ಗಮನಿಸಿದ ಪೆರುಮಾಳ ಅಧಿಕಾರಿಯನ್ನೇ ಈತನೆಂದಿಟ್ಟುಕೊಂಡಲ್ಲಿ ಈತನು ಅಚ್ಯುತರಾಯನ ಕಾಲದಲ್ಲೂ ಅಧಿಕಾರದಲ್ಲಿ ಮುಂದುವರಿದನೆಂದು ಭಾವಿಸಬಹುದಾಗಿದೆ ಜಾ ನ ೭೦೧ ಹುಟ್ಟಿದ ೮ ತಿಂಗಳ ನಂತರದ ಕಾಲದ್ದು ಈ ಜಾ ನ ೮೯

ಹಿರಿಯ ಸಿಂಗಣನಾಯಕನ ಮಗ ಚಿಕ್ಕ ಸಿಂಗಣನಾಯಕನಿಗೆ ಅರಸ ಹದಿನಾಡಸೀಮೆಯ ನಾಯಕತನವನ್ನು ದಯಪಾಲಿಸಿದ್ದ ಈ ಅಧಿಕಾರಿಯನ್ನು ಅರಸನ 'ಪ್ರಿಯಪುತ್ರ'ನೆಂಬುದಾಗಿ ವರ್ಣಿಸಿದೆ ಈ ಶಬ್ದದ ಪದಶಃ ಅರ್ಥವನ್ನು ತೆಗೆದುಕೊಳ್ಳುವಂತಿಲ್ಲ ಈ ಶಾಸನದ ಕಾಲ ಕ್ರಿ ಶ ೧೫೩೧ ಆದರೆ ಕ್ರಿ ಶ. ೧೫೩೫ಕ್ಕೆ ಸೇರುವ ಕೊ ಗಾ ೫೮ ರಲ್ಲಿ ರಾಮಪ್ಪಯ್ಯನೆಂಬ ಇನ್ನೊಬ್ಬ ಅಧಿಕಾರಿಯ ಉಲ್ಲೇಖವಿದ್ದು, ಇಲ್ಲಿ 'ಸಾಮ್ರಾಜ್ಯಧುರಂಧರ' ನೆಂದು ವರ್ಣಿತನಾಗಿರುವ ಅವನಿಗೆ ಹದಿನಾಡಸೀಮೆಯ ನಾಯಕತನವನ್ನು ಪಾಲಿಸಿದ್ದ ವಿಚಾರವನ್ನು ಹೇಳಿದೆ ಮೇಲೆ ಗಮನಿಸಿದ ಶಾಸನದ ಕಾಲಾನಂತರದ ನಾಲ್ಕುವರ್ಷಗಳಲ್ಲಿ ಅಧಿಕಾರದಲ್ಲಿ ಬದಲಾವಣೆಯುಂಟಾಯಿತೆಂಬುದು ಸ್ಪಷ್ಟ ರಾಮಪ್ಪಯ್ಯನಿಗೆ ಕಾರ್ಯಕರ್ತನಾದ ಮಾದಪ್ಪಯ್ಯನು ಮಲ್ಲಿಕಾರ್ಜುನದೇವರಿಗೆ ನೀಡಲಾಗಿದ್ದ ಭೂಮಿಗಳನ್ನೂ ಗ್ರಾಮಗಳನ್ನೂ ಊರ್ಜಿತಗೊಳಿಸಿದ ಈ ರಾಮಪ್ಪಯ್ಯ ಕೊಂಡವೀಡಿನ ರಾಜ್ಯಪಾಲ ಬಯಕಾರ ರಾಮಪ್ಪಯ್ಯನಿಂದ ಭಿನ್ನನೆಂಬುದು ಉಚಿತ

ಕ್ರಿ ಶ ೧೫೩೬ರ ಜಾ ನ ೬೦೩ರಲ್ಲಿ ಅರಸನ ನಿರೂಪದ ಮೇರೆಗೆ ಸೋಮಶಿಲಾದೇವ ರಾಬುತ್ತರಾಯ ಮಹಾಪಾತ್ರ ಅರಸು ತೆರಕಣಾಂಬಿಯ ತಿರುಮಲದೇವರಿಗೆ ಗ್ರಾಮ ಮತ್ತು ಭೂಮಿಗಳನ್ನು ದತ್ತಿಬಿಟ್ಟುದನ್ನು ನಿರೂಪಿಸಿದೆ ದಾನನೀಡಿದ ಗ್ರಾಮ ಇವನ ನಾಯಕತನಕ್ಕೆ ಸೇರಿದ ತೆರಕಣಾಂಬಿಯ ಮೂಡಣ ಸೀಮೆಗೆ ಸೇರಿತ್ತೆಂದು ಹೇಳಿದೆ ಮಹಾಪಾತ್ರ ಎಂಬ ಅಂತ್ಯಗೊಳ್ಳುವ ಹೆಸರಿನಿಂದಾಗಿ ಈತ ಒರಿಸ್ಸಾದಿಂದ ಬಂದವನಿರಬೇಕೆಂದು ಭಾವಿಸುವುದಾದಲ್ಲಿ, ಕೃಷ್ಣರಾಯನ ಕಳಿಂಗದ ಮೇಲಿನ ಯಶಸ್ವಿ ದಂಡಯಾತ್ರೆಯ ಅನಂತರ ಈತ ಅಥವಾ ಈತನ ಪೂರ್ವಜರು ಅರಸನ ಆಪ್ತರಾಗಿ ಬಂದು ಇಲ್ಲಿನ ಸಾಮ್ರಾಜ್ಯದಲ್ಲಿ ಉನ್ನತ ಅಧಿಕಾರಗಳನ್ನು ಪಡೆದಿರಬಹುದಾದ ಸಾಧ್ಯತೆ ಇದೆ ದಾನ ನೀಡಿದ ಗ್ರಾಮವು ಇವನು ಆಳುತ್ತಿದ್ದ ಪ್ರದೇಶದಲ್ಲಿತ್ತು ತೆರಕಣಾಂಬಿ ಅಥವಾ ಕುಡುಗಲೂರು ಹೊಯಸಣದೇಶದ ಒಡಗನಾಡೆಂಬ ಇನ್ನೊಂದು ವಿಭಾಗಕ್ಕೆ ಸೇರಿತ್ತು

ಕಷ್ಟ  ಓರುಂಗಲ್ಲಿನ ಕೊನೆಯ ಪ್ರಮುಖ ದೊರೆಯೆಂದರೆ ಕಾಕತೀಯವಂಶದ ಪ್ರತಾಪರುದ್ರ  ಆದರೆ ಅವನ ಆಳ್ವಿಕೆ ಸುಮಾರು ಕ್ರಿ ಶ ೧೩೨೩ರಲ್ಲಿ ಎಂದರೆ ಹೆಚ್ಚುಕಡಿಮೆ ಎರಡು ಶತಮಾನಗಳ ಹಿಂದೆಯೇ ಕೊನೆಗೊಂಡಿತ್ತು  ಒಂದು ವೇಳೆ ಮೇಲಿನ ಶಾಸನೋಕ್ತರಾದ ಮೂರು ತಲೆಮಾರಿನ ಗುರುಗಳಲ್ಲಿ ಪ್ರತಿಯೊಬ್ಬರಿಗೂ ತಲಾ ೫೦ ವರ್ಷಗಳ ಕಾಲವನ್ನು ನಿಗದಿ ಮಾಡಿದರೂ ಮಲ್ಲಿಕಾರ್ಜುನ ಅಥವಾ ಸೋಮೇಶ್ವರಾಚಾರ್ಯನ ಕಾಲವನ್ನು ೧೪ನೆಯ ಶತಮಾನದ ಮಧ್ಯಭಾಗದವರೆಗೆ ಮಾತ್ರವೇ ಹಿಂದೂಡಬಹುದಷ್ಟೆ  ಈ ಸಂದರ್ಭದಲ್ಲಿ ತನಯ ಅಥವಾ ತನೂಭವ ಎಂದರೆ ಶಿಷ್ಯ ಎಂದು ಭಾವಿಸಬಹುದು ಇಲ್ಲಿ ಕೆಲವು ತಲೆಮಾರುಗಳನ್ನು ಬಿಟ್ಟಿರಬೇಕು  ಆಗಲೂ ಸೋಮೇಶ್ವರ ಅಥವಾ ಮಲ್ಲಿಕಾರ್ಜುನ ಎಂಬ ಹೆಸರಿನ ಯಾವೊಬ್ಬ ಗುರುವೂ ಈ ಕಾಕತೀಯ ಅರಸನಿಗಿದ್ದಂತೆ ನಮಗೆ ತಿಳಿದುಬಂದಿಲ್ಲ  ಹಾಗೆಯೇ ವೀರಶೈವ ಗುರು ಬಸವೇಶ್ವರನ ಸಮಕಾಲೀನ ಮಲ್ಲಿಕಾರ್ಜುನಪಂಡಿತನ ಜೀವನಚರಿತ್ರೆಯನ್ನು 'ಪಂಡಿತಾರಾಧ್ಯ ಚರಿತ್ರ' ಎಂಬ ಹೆಸರಿನಲ್ಲಿ ಬರೆದ ಪಾಲ್ಕುರಿಕೆ ಸೋಮನಾಥನನ್ನು ಈ ಸೋಮನಾಥ ಎಂಬ ಹೆಸರು ಸೂಚಿಸುತ್ತದೆಯೇ ಎಂಬುದನ್ನೂ ಖಚಿತವಾಗಿ ಹೇಳಲು ಸಾಧ್ಯವಿಲ್ಲ  ಅರಸನಾದ ಕೃಷ್ಣದೇವರಾಯನನ್ನು ನಾರಸಿಂಹವರ್ಮಮಹಾರಾಜನ ಮಗ ಮತ್ತು ಕರಾರಿ ಸಾಳುವ ಎಂಬ ಬಿರುದನ್ನು ಧರಿಸಿದ ಕೃಷ್ಣವರ್ಮಮಹಾಧಿರಾಯನೆಂಬುದಾಗಿ ಇಲ್ಲಿ ಉಲ್ಲೇಖಿಸಲಾಗಿದೆ  ಇದು ಸರಿಯಲ್ಲ

ಚಾ ನ ೧೬೨ನೆಯ ಶಾಸನ ಆಳರಸನನ್ನು ಹೆಸರಿಸುವುದಿಲ್ಲವಾದರೂ ಕೃಷ್ಣದೇವರಾಯನ ಪ್ರಸಿದ್ಧಮಂತ್ರಿಯಾದ ಸಾಳುವ ಗೋವಿಂದರಾಜಯ್ಯನನ್ನು ಉಲ್ಲೇಖಿಸುತ್ತದೆಯಾದ್ದರಿಂದ  ಇದು ಕೃಷ್ಣದೇವರಾಯನ ಶಾಸನವೆನ್ನಬಹುದು  ಈ ಶಾಸನದ ಕಾಲವನ್ನು ಕ್ರಿ ಶ ೧೫೧೫, ಡಿಸೆಂಬರ್ ೧೦ಕ್ಕೆ ಹೊಂದಿಸಬಹುದಾಗಿದೆ  ಶಾಸನವು ಸ್ವಾರಸ್ಯಕರವಾದ ಆಡಳಿತ ವ್ಯವಹಾರವನ್ನು ಕುರಿತು ತಿಳಿಸುತ್ತದೆ  ದೊಡ್ಡಣ್ಣಸೆಟ್ಟಿ ಎಂಬುವನಿಗೆ ಸೇರಿದ ಹತ್ತು ಅಂಕಣದ ಗೃಹನಿವೇಶನವನ್ನು ಅರಮನೆಗೆ ತೆಗೆದುಕೊಂಡು ಪ್ರತಿಯಾಗಿ ಅವನಿಗೆ ಅದೇ ಅಳತೆಯ ಬೇರೆ ನಿವೇಶನವನ್ನು ನೀಡಲಾಯಿತು  ಆದರೆ ಆತನಿಗೆ ನೀಡಿದ ನಿವೇಶನವು ನಂಜೇದೇವ ಎಂಬುವನಿಗೆ ಸೇರಿದುದಾಗಿದ್ದು  ಆತ ಕುಳಸ್ಥೆಯನ್ನು (ತೆರಿಗೆ ?) ತೆರಲಾರದ ಪರಿಸ್ಥಿತಿಯಲ್ಲಿದ್ದುದರಿಂದ ಅರಮನೆಗೆ ಒಪ್ಪಿಸಿದ್ದಂತೆ ತೋರುತ್ತದೆ  ಈ ಸಂಬಂಧದಲ್ಲಿ ನಂಜೇದೇವನು ಅರಮನೆಗೆ ಕೆಂಪೊತ್ತಿದ ವೋಲೆಯನ್ನು ನೀಡಿದನೆಂದು ಹೇಳಿದೆ  ಇದು ಪ್ರಾಯಶಃ ಆಸ್ತಿಪತ್ರವಾಗಿರಬಹುದು

ಕ್ರಿ ಶ ೧೫೨೨ಕ್ಕೆ ಸೇರುವ ಕೊ ಗಾ ೮೨ನೆಯ  ಶಾಸನದಿಂದ ರಾಜರಾಜನ ಮಗನಾದ ಸಾಳುವ ಗೋವಿಂದ ರಾಜನಿಗೆ ಉಮ್ಮತ್ತೂರ ನಾಯಕತನವನ್ನು ಒಪ್ಪಿಸಲಾಗಿತ್ತೆಂದು ತಿಳಿದುಬರುತ್ತದೆ  ಅರಸನ ಮಹಾಪ್ರಧಾನ ತಿಮ್ಮರಸ ಹಾಗೂ ಗೋವಿಂದರಾಜರ ತಂದೆಯಾದ ರಾಚಯ್ಯನೇ ಪ್ರಾಯಶಃ ಈ ರಾಜರಾಜನಿರಬಹುದು  ಪ್ರಕೃತ ಶಾಸನದ ಪ್ರಕಾರ ಈ ಗೋವಿಂದರಾಜನು ತನ್ನ ನಾಯಕತನಕ್ಕೆ ಸಲ್ಲುವ ಹೊಸನಾಡಸ್ಥಳದ ಕಲಿಯುಗವಾಡಿಗ್ರಾಮವನ್ನು ತಿರುಮಕೂಡಲ ಕಾವೇರಿ ಹಾಗೂ ಕಪಿನೀ ನದಿಗಳಿಗೆ ಸೋಪಾನವನ್ನು (ಅಲರೆ ?) ಕಟ್ಟುವ ತಿರುಪಣಿ ಕೆಲಸಕ್ಕೆ ದಾನ ನೀಡಿದ

ಕ್ರಿ ಶ ೧೫೨೩ರ ಚಾ ನ ೨೨೪ರಲ್ಲಿ ಗೋವಿಂದರಾಜನ ಕೈಕೆಳಗೆ ಮೂಗಣಿಕಾರನಾಗಿದ್ದ ತುಮುಮುಡಿಪಾಕದ ತಿರುವೇಂಗಡಮುದಲಿಯಾರನ ಮಗ ಜಡೆಯಾರುಮುದಲಿಯಾರು ಹಟ್ಟಲಕೋಟೆಯಲ್ಲಿ ವೀರಭದ್ರದೇವರ ಪ್ರತಿಷ್ಠೆ ಮಾಡಿಸಿದುದನ್ನು ನಿರೂಪಿಸಲಾಗಿದೆ  ದಾನ ನೀಡಿದ ಭೂಮಿಕಾಣಿಗಳನ್ನು ಆ ದೇವರ ಸ್ಥಾನಕ್ಕೆ ಕರ್ತನಾದ ಅಲ್ಲಪ್ಪನಿಗೆ ಸಲ್ಲಿಸಲಾಯಿತು  ಮುಂದೆ ಮತ್ತಾರಾದರೂ ದಾನ ನೀಡಿದರೆ ಅದೂ ಅಲ್ಲಪ್ಪನಿಗೇ ಸಲ್ಲಬೇಕೆಂದೂ, ದೇವರಪೂಜೆಗೆ ತನಗಿಷ್ಟಬಂದವರನ್ನು ಅರ್ಚಕರನ್ನಾಗಿ ನೇಮಿಸಿಕೊಳ್ಳುವ ಪೂರ್ಣಾಧಿಕಾರ ಅವನಿಗುಂಟೆಂದೂ ಇವುಗಳ ಬಗ್ಗೆ ಪಾರುಪತ್ಯಗಾರನೂ ಪ್ರಶ್ನಿಸುವಂತಿಲ್ಲವೆಂದೂ ಹೇಳಿದೆ  ದೇವಾಲಯದ ಶ್ರೀಕಾರ್ಯವನ್ನು ವೇಳೆವೇಳೆಗೆ ತಪ್ಪದೆ ನಡೆಸಿಕೊಂಡು ಬರಬೇಕೆಂಬುದು ಅತಿ ಮುಖ್ಯವಾದ ನಿಬಂಧನೆಯಾಗಿತ್ತು

ಚಾ ನ ೧೦೦ನೆಯ ಶಾಸನ ಉಮ್ಮತ್ತೂರಿನಲ್ಲಿದೆ  ತ್ರುಟಿತವಾಗಿರುವ ಈ ಶಾಸನದ ಕಾಲ ಕ್ರಿ ಶ ೧೫೨೭ ಅರಸ ಕೃಷ್ಣರಾಯನಿಗೆ ಧರ್ಮಕೀರ್ತಿಯಾಗಬೇಕೆಂದು ಅವಸರದ ದೇಮರಸಯ್ಯನ ನಿರೂಪದ ಮೇರೆಗೆ ಲಕ್ಕರಾಜನ ಮಗ ತಿಮ್ಮರಾಜನು ದೇವಾಲಯವೊಂದರ ಗರ್ಭಗೃಹ, ಸುಕನಾಸಿ ಮತ್ತಿತರ ಭಾಗಗಳನ್ನು ಜೀರ್ಣೋದ್ಧಾರಗೊಳಿಸಿದುದನ್ನು ಇದು ನಿರೂಪಿಸುತ್ತದೆ  ದೇವಾಲಯದ ಹೆಸರು ನಷ್ಟವಾಗಿದೆ  ಈ ದೇಮರಸಯ್ಯನ ಉಲ್ಲೇಖ ಇತರ ಶಾಸನಗಳಲ್ಲೂ ಕಂಡುಬರುತ್ತದೆ  ಈತನಿಗೆ ಉಮ್ಮತ್ತೂರ ಸೀಮೆಯ ನಾಯಕತನವನ್ನು ಅರಸನು ದಯಪಾಲಿಸಿದ್ದನೆಂದು ಚಾ ನ ೩೪೭ನೆಯ ಹೆಗ್ಗೊರಾರದ ಶಾಸನ ತಿಳಿಸುತ್ತದೆ  ಅರಸನ ನಿರೂಪದ ಮೇರೆಗೆ, ಆ ಸೀಮೆಯ ತಗಡೂರ ಸ್ಥಳಕ್ಕೆ ಸಲ್ಲುವ ಹೆಗ್ಗೊರಾರ ಹಾಗೂ ಅದರ ಉಪಗ್ರಾಮವಾದ ಪುರಗಳನ್ನು ಸರ್ವಸ್ವಾಮ್ಯಸಹಿತವಾಗಿ ಬಮ್ಮಾಪುರದ ಬಾಲಕೃಷ್ಣದೇವರ

ಅಂಗರಂಗಭೋಗಾದಿ ಸೇವೆಗಳಿಗೆ ಈತ ದಾನ ನೀಡಿದ ದಾನ ಮಾಡಿದುದು ತುಂಗಭದ್ರಾತೀರದ ಪಂಪಾಕ್ಷೇತ್ರದ ವಿರೂಪಾಕ್ಷೇಶ್ವರನ ಸನ್ನಿಧಿಯಲ್ಲಿ

ಕೃಷ್ಣರಾಯಮಹಾರಾಯನ ಕಾರ್ಯಕರ್ತನಾದ ಕೃಷ್ಣರಾಯನಾಯಕನು ಕೋಟೆಯಸೀಮೆಯ ತಂಗ ಸ್ಥಳಕ್ಕೆ ಸಲ್ಲುವ ನೆಟ್ಟಹಳ್ಳಿಗ್ರಾಮವನ್ನು ಮಹಾದೇವದೇವರಿಗೆ ದತ್ತಿಬಿಟ್ಟ ವಿಷಯವನ್ನು ಅದೇ ಗ್ರಾಮದ ಪಿ ಪ ೧೩೩ನೆಯ ಶಾಸನ ನಿರೂಪಿಸುತ್ತದೆ ಬಾಣಸಿಗ ವಿನಿಯೋಗವನ್ನೂ ಈ ದತ್ತಿಯು ಒಳಗೊಳ್ಳುತ್ತದೆಂದು ಹೇಳಿದೆ ಇದು ಬಹುಶಃ ದೇವಾಲಯದಲ್ಲಿ ನೇಮಕಗೊಂಡ ಬಾಣಸಿಗರಿಗೆ ನೈವೇದ್ಯದ ವಿತರಣೆಯನ್ನು ಸೂಚಿಸುತ್ತದೆ ಅರ್ಚಕರು ಬಾಣಸಿಗರು ಮುಂತಾದ ದೇವಾಲಯದ ಸಿಬ್ಬಂದಿವರ್ಗದವರಿಗೆ ದೇವರ ನೈವೇದ್ಯವನ್ನು ಹಂಚುವ ಪದ್ಧತಿ ಇಂದಿಗೂ ದಕ್ಷಿಣ ಭಾರತದ ದೇವಾಲಯಗಳಲ್ಲಿದೆ

ಕೊ ಗಾ ೮೩ನೆಯ ಹನೂರ ಶಾಸನ ಕುತೂಹಲಕರವಾಗಿದೆ ಇದರಲ್ಲಿ ಕೆಲವು ಗೌಡುಗಳು ವಿಜಯನಗರಕ್ಕೆ ಹೋಗಿ ಅಲ್ಲಿ ಅರಸ, ಸಾಳುವ ತಿಮ್ಮರಸ, ಗೋವಿಂದರಾಜಯ್ಯ ಮತ್ತಿತರರನ್ನು ಭೇಟಿಮಾಡಿದುದನ್ನು ಉಲ್ಲೇಖಿಸಿರುವಂತೆ ತೋರುತ್ತದೆ ದುರ್ದೈವದಿಂದ ಈ ಶಾಸನ ಭಿನ್ನವಾಗಿದ್ದು, ಅವರ ಭೇಟಿಯ ಉದ್ದೇಶವಾಗಲೀ ಅದರ ಪರಿಣಾಮವಾಗಲೀ ತಿಳಿದುಬರುವುದಿಲ್ಲ

ಅಚ್ಯುತರಾಯನ ಶಾಸನಗಳಲ್ಲಿ ಕ್ರಿ ಶ ೧೫೩೦ಕ್ಕೆ ಸೇರುವ ಚಾ ನ ೪೦೧ನೆಯ ನಂಜೇದೇವರಪುರದ ಶಾಸನವೇ ಪ್ರಾಚೀನತಮವಾದುದು ಅದು ಅರಸನನ್ನು ನೇರವಾಗಿ ಉಲ್ಲೇಖಿಸಿಲ್ಲ, ಆದರೆ ಆತನ ನಿರೂಪದ ಮೇರೆಗೆ ಪೆರುಮಾಳ ಅಧಿಕಾರಿಅಯ(?)ನು ಉಯಂಬಳಿಸ್ಥಳದ ದಣಾಯಕನಪುರ ಎಂಬ ಗ್ರಾಮವನ್ನು ದತ್ತಿ ಬಿಟ್ಟುದನ್ನು ತಿಳಿಸುತ್ತದೆ ಪೆರುಮಾಳ ಅಧಿಕಾರಿ ಚಲ್ಲಯ್ಯನಿಗೆ ಪುಣ್ಯವಾಗಬೇಕೆಂದು ಗಂಗನಾಯಕನ ಮಗ ದಳವಾಯಿ ರಂಗನಾಯಕನು ಉಮ್ಮತ್ತೂರ ರಂಗನಾಥದೇವರಿಗೆ ದತ್ತಿ ಬಿಟ್ಟ ಸಂಗತಿಯನ್ನು ಕ್ರಿ ಶ ೧೫೩೧ರ ಉಮ್ಮತ್ತೂರು ಗ್ರಾಮದ ಚಾ ನ ೮೯ ರಲ್ಲಿ ನಿರೂಪಿಸಿದೆ ಈ ಪೆರುಮಾಳ ಅಧಿಕಾರಿ ಚಲ್ಲಯ್ಯನು ಕೃಷ್ಣರಾಯಮಹಾರಾಯನ ಕಾರ್ಯಕರ್ತನೆಂದು ಇಲ್ಲಿ ಹೇಳಿದೆ ಆದರೆ ಶಾಸನದ ಕಾಲದ ಪ್ರಕಾರ ಅಚ್ಯುತರಾಯ ಆಳುತ್ತಿದ್ದನೆಂದಾಗುತ್ತದೆ ಮೇಲೆ ಗಮನಿಸಿದ ಪೆರುಮಾಳ ಅಧಿಕಾರಿಅಯನೆ ಈತನೆಂದಿಟ್ಟುಕೊಂಡಲ್ಲಿ ಈತನು ಅಚ್ಯುತರಾಯನ ಕಾಲದಲ್ಲೂ ಅಧಿಕಾರದಲ್ಲಿ ಮುಂದುವರಿದನೆಂದು ಭಾವಿಸಬಹುದಾಗಿದೆ ಚಾ ನ ೪೦೧ ಹುಟ್ಟಿದ ೮ ತಿಂಗಳ ನಂತರದ ಕಾಲದ್ದು ಈ ಚಾ ನ ೮೯

ಹಿರಿಯ ಸಿಂಗಣನಾಯಕನ ಮಗ ಚಿಕ್ಕ ಸಿಂಗಣನಾಯಕನಿಗೆ ಅರಸ ಹದಿನಾಡಸೀಮೆಯ ನಾಯಕತನವನ್ನು ದಯಪಾಲಿಸಿದ್ದ ಈ ಅಧಿಕಾರಿಯನ್ನು ಅರಸನ 'ಪ್ರಿಯಪುತ್ರ'ನೆಂಬುದಾಗಿ ವರ್ಣಿಸಿದೆ ಈ ಶಬ್ದದ ಪದಶಃ ಅರ್ಥವನ್ನು ತೆಗೆದುಕೊಳ್ಳುವಂತಿಲ್ಲ ಈ ಶಾಸನದ ಕಾಲ ಕ್ರಿ ಶ ೧೫೩೧ ಆದರೆ ಕ್ರಿ ಶ ೧೫೩೫ಕ್ಕೆ ಸೇರುವ ಕೊ ಗಾ ೫೮ ರಲ್ಲಿ ರಾಮಪ್ಪಯ್ಯನೆಂಬ ಇನ್ನೊಬ್ಬ ಅಧಿಕಾರಿಯ ಉಲ್ಲೇಖವಿದ್ದು, ಇಲ್ಲಿ 'ಸಾಮ್ರಾಜ್ಯಧುರಂಧರ' ನೆಂದು ವರ್ಣಿತನಾಗಿರುವ ಅವನಿಗೆ ಹದಿನಾಡಸೀಮೆಯ ನಾಯಕತನವನ್ನು ಪಾಲಿಸಿದ್ದ ವಿಚಾರವನ್ನು ಹೇಳಿದೆ ಮೇಲೆ ಗಮನಿಸಿದ ಶಾಸನದ ಕಾಲಾನಂತರದ ನಾಲ್ಕುವರ್ಷಗಳಲ್ಲಿ ಅಧಿಕಾರದಲ್ಲಿ ಬದಲಾವಣೆಯುಂಟಾಯಿತೆಂಬುದು ಸ್ಪಷ್ಟ ರಾಮಪ್ಪಯ್ಯನಿಗೆ ಕಾರ್ಯಕರ್ತನಾದ ಮಾದಪ್ಪಯ್ಯನು ಮಲ್ಲಿಕಾರ್ಜುನದೇವರಿಗೆ ನೀಡಲಾಗಿದ್ದ ಭೂಮಿಗಳನ್ನೂ ಗ್ರಾಮಗಳನ್ನೂ ಊರ್ಜಿತಗೊಳಿಸಿದ ಈ ರಾಮಪ್ಪಯ್ಯ ಕೊಂಡವೀಡಿನ ರಾಜ್ಯಪಾಲ ಬಯಕಾರ ರಾಮಪ್ಪಯ್ಯನಿಂದ ಭಿನ್ನನೆಂಬುದು ಖಚಿತ

ಕ್ರಿ ಶ ೧೫೩೬ರ ಚಾ ನ ೩೦೩ರಲ್ಲಿ ಅರಸನ ನಿರೂಪದ ಮೇರೆಗೆ ಸೋಮಶಿಲಾದೇಉ ರಾಉತ್ತರಾಯ ಮಹಾಪಾತ್ರ ಅರಸು ತೆರಕಣಾಂಬೆಯ ತಿರುಮಲದೇವರಿಗೆ ಗ್ರಾಮ ಮತ್ತು ಭೂಮಿಗಳನ್ನು ದತ್ತಿಬಿಟ್ಟುದನ್ನು ನಿರೂಪಿಸಿದೆ ದಾನನೀಡಿದ ಗ್ರಾಮ ಇವನ ನಾಯಕತನಕ್ಕೆ ಸೇರಿದ ತೆರಕಣಾಂಬೆಯ ಮೂಡಣ ಸೀಮೆಗೆ ಸೇರಿತ್ತೆಂದು ಹೇಳಿದೆ ಮಹಾಪಾತ್ರ ಎಂದು ಅಂತ್ಯಗೊಳ್ಳುವ ಹೆಸರಿನಿಂದಾಗಿ ಈತ ಒರಿಸ್ಸಾದಿಂದ ಬಂದವನಿರಬೇಕೆಂದು ಭಾವಿಸುವುದಾದಲ್ಲಿ, ಕೃಷ್ಣರಾಯನ ಕಳಿಂಗದ ಮೇಲಿನ ಯಶಸ್ವೀ ದಂಡಯಾತ್ರೆಯ ಅನಂತರ ಈತ ಅಥವಾ ಈತನ ಪೂರ್ವಜರು ಅರಸನ ಅನುಯಾಯಿಗಳಾಗಿ ಬಂದು ಇಲ್ಲಿನ ಸಾಮ್ರಾಜ್ಯದಲ್ಲಿ ಉನ್ನತ ಅಧಿಕಾರಗಳನ್ನು ಪಡೆದಿರಬಹುದಾದ ಸಾಧ್ಯತೆ ಇದೆ ದಾನ ನೀಡಿದ ಗ್ರಾಮವು ಇವನು ಆಳುತ್ತಿದ್ದ ಪ್ರದೇಶದಲ್ಲಿತ್ತು, ತೆರಕಣಾಂಬೆ ಅಥವಾ ಕುಡಗಲೂರು ಹೊಯಿಸಣದೇಶದ ಬಡಗನಾಡೆಂಬ ಇನ್ನೊಂದು ವಿಭಾಗಕ್ಕೆ ಸೇರಿತ್ತು

ಕಷ್ಟ ಓರುಂಗಲ್ಲಿನ ಕೊನೆಯ ಪ್ರಮುಖ ದೊರೆಯೆಂದರೆ ಕಾಕತೀಯವಂಶದ ಪ್ರತಾಪರುದ್ರ ಆದರೆ ಅವನ ಆಳ್ವಿಕೆ ಸುಮಾರು ಕ್ರಿ ಶ ೧೩೨೩ರಲ್ಲಿ ಎಂದರೆ ಹೆಚ್ಚುಕಡಿಮೆ ಎರಡು ಶತಮಾನಗಳ ಹಿಂದೆಯೇ ಕೊನೆಗೊಂಡಿತ್ತು ಒಂದು ವೇಳೆ ಮೇಲಿನ ಶಾಸನೋಕ್ತರಾದ ಮೂರು ತಲೆಮಾರಿನ ಗುರುಗಳಲ್ಲಿ ಪ್ರತಿಯೊಬ್ಬರಿಗೂ ತಲಾ ೫೦ ವರ್ಷಗಳ ಕಾಲವನ್ನು ನಿಗದಿ ಮಾಡಿದರೂ ಮಲ್ಲಿಕಾರ್ಜುನ ಅಥವಾ ಸೋಮೇಶ್ವರಾಚಾರ್ಯನ ಕಾಲವನ್ನು ೧೪ನೆಯ ಶತಮಾನದ ಮಧ್ಯಭಾಗದವರೆಗೆ ಮಾತ್ರವೇ ಹಿಂದೂಡಬಹುದಷ್ಟೆ ಈ ಸಂದರ್ಭದಲ್ಲಿ ತನಯ ಅಥವಾ ತನೂಭವ ಎಂದರೆ ಶಿಷ್ಯ ಎಂದು ಭಾವಿಸಬಹುದು ಇಲ್ಲಿ ಕೆಲವು ತಲೆಮಾರುಗಳನ್ನು ಬಿಟ್ಟಿರಬೇಕು ಆಗಲೂ ಸೋಮೇಶ್ವರ ಅಥವಾ ಮಲ್ಲಿಕಾರ್ಜುನ ಎಂಬ ಹೆಸರಿನ ಯಾವೊಬ್ಬ ಗುರುವೂ ಈ ಕಾಕತೀಯ ಅರಸನಿಗಿದ್ದಂತೆ ನಮಗೆ ತಿಳಿದುಬಂದಿಲ್ಲ ಹಾಗೆಯೇ ವೀರಶೈವ ಗುರು ಬಸವೇಶ್ವರನ ಸಮಕಾಲೀನ ಮಲ್ಲಿಕಾರ್ಜುನಪಂಡಿತನ ಜೀವನಚರಿತ್ರೆಯನ್ನು 'ಪಂಡಿತಾರಾಧ್ಯ ಚರಿತ್ರ' ಎಂಬ ಹೆಸರಿನಲ್ಲಿ ಬರೆದ ಪಾಲ್ಕುರಿಕೆ ಸೋಮನಾಥನನ್ನು ಈ ಸೋಮನಾಥ ಎಂಬ ಹೆಸರು ಸೂಚಿಸುತ್ತದೆಯೇ ಎಂಬುದನ್ನೂ ಖಚಿತವಾಗಿ ಹೇಳಲು ಸಾಧ್ಯವಿಲ್ಲ ಅರಸನಾದ ಕೃಷ್ಣದೇವರಾಯನನ್ನು ನಾರಸಿಂಹವರ್ಮಮಹಾರಾಜನ ಮಗ ಮತ್ತು ಕರಾರಿ ಸಾಳುವ ಎಂಬ ಬಿರುದನ್ನು ಧರಿಸಿದ ಕೃಷ್ಣವರ್ಮಮಹಾಧಿರಾಯನೆಂಬುದಾಗಿ ಇಲ್ಲಿ ಉಲ್ಲೇಖಿಸಲಾಗಿದೆ ಇದು ಸರಿಯಲ್ಲ

ಚಾ ನ ೧೬೨ನೆಯ ಶಾಸನ ಆಳರಸನನ್ನು ಹೆಸರಿಸುವುದಿಲ್ಲವಾದರೂ ಕೃಷ್ಣದೇವರಾಯನ ಪ್ರಸಿದ್ಧಮಂತ್ರಿಯಾದ ಸಾಳುವ ಗೋವಿಂದರಾಜಯ್ಯನನ್ನು ಉಲ್ಲೇಖಿಸುತ್ತದೆಯಾದ್ದರಿಂದ ಇದು ಕೃಷ್ಣದೇವರಾಯನ ಶಾಸನವೆನ್ನಬಹುದು ಈ ಶಾಸನದ ಕಾಲವನ್ನು ಕ್ರಿ ಶ ೧೫೧೫, ಡಿಸೆಂಬರ್ ೧೦ಕ್ಕೆ ಹೊಂದಿಸಬಹುದಾಗಿದೆ ಶಾಸನವು ಸ್ವಾರಸ್ಯಕರವಾದ ಆಡಳಿತ ವ್ಯವಹಾರವನ್ನು ಕುರಿತು ತಿಳಿಸುತ್ತದೆ ದೊಡ್ಡಣ್ಣಸೆಟ್ಟಿ ಎಂಬುವನಿಗೆ ಸೇರಿದ ಹತ್ತು ಅಂಕಣದ ಗೃಹನಿವೇಶನವನ್ನು ಅರಮನೆಗೆ ತೆಗೆದುಕೊಂಡು ಪ್ರತಿಯಾಗಿ ಅವನಿಗೆ ಅದೇ ಅಳತೆಯ ಬೇರೆ ನಿವೇಶನವನ್ನು ನೀಡಲಾಯಿತು ಆದರೆ ಆತನಿಗೆ ನೀಡಿದ ನಿವೇಶನವು ನಂಜೇದೇವ ಎಂಬುವನಿಗೆ ಸೇರಿದುದಾಗಿದ್ದು ಆತ ಕುಳನ್ನೆಯನ್ನು (ತೆರಿಗೆ ?) ತೆರಲಾರದ ಪರಿಸ್ಥಿತಿಯಲ್ಲಿದ್ದುದರಿಂದ ಅರಮನೆಗೆ ಒಪ್ಪಿಸಿದ್ದಂತೆ ತೋರುತ್ತದೆ ಈ ಸಂಬಂಧದಲ್ಲಿ ನಂಜೇದೇವನು ಅರಮನೆಗೆ ಕೆಂಪೊತ್ತಿದ ಓಲೆಯನ್ನು ನೀಡಿದನೆಂದು ಹೇಳಿದೆ ಇದು ಪ್ರಾಯಶಃ ಆಸ್ತಿಪತ್ರವಾಗಿರಬಹುದು

ಕ್ರಿ ಶ ೧೫೨೨ಕ್ಕೆ ಸೇರುವ ಕೊ ಗಾ ೮೨ನೆಯ ಶಾಸನದಿಂದ ರಾಜರಾಜನ ಮಗನಾದ ಸಾಳುವ ಗೋವಿಂದರಾಜನಿಗೆ ಉಮ್ಮತ್ತೂರ ನಾಯಕತನವನ್ನು ಒಪ್ಪಿಸಲಾಗಿತ್ತೆಂದು ತಿಳಿದುಬರುತ್ತದೆ ಅರಸನ ಮಹಾಪ್ರಧಾನ ತಿಮ್ಮರಸ ಹಾಗೂ ಗೋವಿಂದರಾಜರ ತಂದೆಯಾದ ರಾಚಯ್ಯನೇ ಪ್ರಾಯಶಃ ಈ ರಾಜರಾಜನಿರಬಹುದು ಪ್ರಕೃತ ಶಾಸನದ ಪ್ರಕಾರ ಈ ಗೋವಿಂದರಾಜನು ತನ್ನ ನಾಯಕತನಕ್ಕೆ ಸಲ್ಲುವ ಹೊಸನಾಡಸ್ಥಳದ ಕಲಿಯುಗವಾಡಿಗ್ರಾಮವನ್ನು ತಿರುಮುಕೂಡಲ ಕಾವೇರಿ ಹಾಗೂ ಕಪಿನೀ ನದಿಗಳಿಗೆ ಸೋಪಾನವನ್ನು (ಅಲರೆ ?) ಕಟ್ಟುವ ತಿರುಪಣಿ ಕೆಲಸಕ್ಕೆ ದಾನ ನೀಡಿದ

ಕ್ರಿ ಶ ೧೫೨೩ರ ಚಾ ನ ೨೨೪ರಲ್ಲಿ ಗೋವಿಂದರಾಜನ ಕೈಕೆಳಗೆ ಮಾಗಣಿಕಾಜಿನಾಗಿದ್ದ ತುಮುಮುಡಿಪಾಳದ ತಿರುವೇಂಗಡಮುದಲಿಯಾರನ ಮಗ ಜಡೆಯಾರುಮುದಲಿಯಾರು ಹಟ್ಟಲಕೋಟೆಯಲ್ಲಿ ವೀರಭದ್ರದೇವರ ಪ್ರತಿಷ್ಠೆ ಮಾಡಿಸಿದುದನ್ನು ನಿರೂಪಿಸಲಾಗಿದೆ ದಾನ ನೀಡಿದ ಭೂಮಿಕಾಣಿಗಳನ್ನು ಆ ದೇವರ ಸ್ಥಾನಕ್ಕೆ ಕರ್ತನಾದ ಅಲ್ಲಪ್ಪನಿಗೆ ಸಲ್ಲಿಸಲಾಯಿತು ಮುಂದೆ ಮತ್ತಾರಾದರೂ ದಾನ ನೀಡಿದರೆ ಅದೂ ಅಲ್ಲಪ್ಪನಿಗೇ ಸಲ್ಲಬೇಕೆಂದೂ, ದೇವರಪೂಜೆಗೆ ತನಗಿಷ್ಟಬಂದವರನ್ನು ಅರ್ಚಕರನ್ನಾಗಿ ನೇಮಿಸಿಕೊಳ್ಳುವ ಪೂರ್ಣಾಧಿಕಾರ ಅವನಿಗುಂಟೆಂದೂ ಇವುಗಳ ಬಗ್ಗೆ ಪಾರುಪತ್ಯಗಾರನೂ ಪ್ರಶ್ನಿಸುವಂತಿಲ್ಲವೆಂದೂ ಹೇಳಿದೆ ದೇವಾಲಯದ ಶ್ರೀಕಾರ್ಯವನ್ನು ವೇಳೆವೇಳೆಗೆ ತಪ್ಪದೆ ನಡೆಸಿಕೊಂಡು ಬರಬೇಕೆಂಬುದು ಅತಿ ಮುಖ್ಯವಾದ ನಿಬಂಧನೆಯಾಗಿತ್ತು

ಚಾ ನ ೧೦೦ನೆಯ ಶಾಸನ ಉಮ್ಮತ್ತೂರಿನಲ್ಲಿದೆ ತ್ರುಟಿತವಾಗಿರುವ ಈ ಶಾಸನದ ಕಾಲ ಕ್ರಿ ಶ ೧೫೨೭ ಅರಸ ಕೃಷ್ಣರಾಯನಿಗೆ ಧರ್ಮಕೀರ್ತಿಯಾಗಬೇಕೆಂದು ಅವಸರದ ದೇಮರಸಯ್ಯನ ನಿರೂಪದ ಮೇರೆಗೆ ಲಕ್ಕರಾಜನ ಮಗ ತಿಮ್ಮರಾಜನು ದೇವಾಲಯವೊಂದರ ಗರ್ಭಗೃಹ, ಸುಕನಾಸಿ ಮತ್ತಿತರ ಭಾಗಗಳನ್ನು ಜೀರ್ಣೋದ್ಧಾರಗೊಳಿಸಿದುದನ್ನು ಇದು ನಿರೂಪಿಸುತ್ತದೆ ದೇವಾಲಯದ ಹೆಸರು ನಷ್ಟವಾಗಿದೆ ಈ ದೇಮರಸಯ್ಯನ ಉಲ್ಲೇಖ ಇತರ ಶಾಸನಗಳಲ್ಲೂ ಕಂಡುಬರುತ್ತದೆ ಈತನಿಗೆ ಉಮ್ಮತ್ತೂರ ಸೀಮೆಯ ನಾಯಕತನವನ್ನು ಅರಸನು ದಯಪಾಲಿಸಿದ್ದನೆಂದು ಚಾ ನ ೩೮೭ನೆಯ ಹೆಗ್ಗೊರಾರದ ಶಾಸನ ತಿಳಿಸುತ್ತದೆ ಅರಸನ ನಿರೂಪದ ಮೇರೆಗೆ, ಆ ಸೀಮೆಯ ತಗಡೂರ ಸ್ಥಳಕ್ಕೆ ಸಲ್ಲುವ ಹೆಗ್ಗೊರಾರ ಹಾಗೂ ಅದರ ಉಪಗ್ರಾಮವಾದ ಪುರಗಳನ್ನು ಸರ್ವಸ್ವಾಮ್ಯಸಹಿತವಾಗಿ ಬಮ್ಮಾಪುರದ ಬಾಲಕೃಷ್ಣದೇವರ

ಅಂಗರಂಗಭೋಗಾದಿ ಸೇವೆಗಳಿಗೆ ಈತ ದಾನ ನೀಡಿದ ದಾನ ಮಾಡಿದುದು ತುಂಗಭದ್ರಾತೀರದ ಪಂಪಾಕ್ಷೇತ್ರದ ವಿರೂಪಾಕ್ಷೇಶ್ವರನ ಸನ್ನಿಧಿಯಲ್ಲಿ

ಕೃಷ್ಣರಾಯಮಹಾರಾಯನ ಕಾರ್ಯಕರ್ತನಾದ ಕೃಷ್ಣರಾಯನಾಯಕನು ಕೋಟೆಯಸೀಮೆಯ ತುಂಗ ಸ್ಥಳಕ್ಕೆ ಸಲ್ಲುವ ನೆಟ್ಟಹಳ್ಳಿಗ್ರಾಮವನ್ನು ಮಹಾದೇವದೇವರಿಗೆ ದತ್ತಿಬಿಟ್ಟ ವಿಷಯವನ್ನು ಅದೇ ಗ್ರಾಮದ ಪಿ ಪ ೧೫೩೩ನೆಯ ಶಾಸನ ನಿರೂಪಿಸುತ್ತದೆ ಬಾಣಸಿಗ ವಿನಿಯೋಗವನ್ನೂ ಈ ದತ್ತಿಯು ಒಳಗೊಳ್ಳುತ್ತದೆಂದು ಹೇಳಿದೆ ಇದು ಬಹುಶಃ ದೇವಾಲಯದಲ್ಲಿ ನೇಮಕಗೊಂಡ ಬಾಣಸಿಗರಿಗೆ ನೈವೇದ್ಯದ ವಿತರಣೆಯನ್ನು ಸೂಚಿಸುತ್ತದೆ ಅರ್ಚಕರು ಬಾಣಸಿಗರು ಮುಂತಾದ ದೇವಾಲಯದ ಸಿಬ್ಬಂದಿವರ್ಗದವರಿಗೆ ದೇವರ ನೈವೇದ್ಯವನ್ನು ಹಂಚುವ ಪದ್ಧತಿ ಇಂದಿಗೂ ದಕ್ಷಿಣ ಭಾರತದ ದೇವಾಲಯಗಳಲ್ಲಿದೆ

ಕೊ ಗಾ ೮೩ನೆಯ ಹನೂರ ಶಾಸನ ಕುತೂಹಲಕರವಾಗಿದೆ ಇದರಲ್ಲಿ ಕೆಲವು ಗೌಡುಗಳು ವಿಜಯನಗರಕ್ಕೆ ಹೋಗಿ ಅಲ್ಲಿ ಅರಸ, ಸಾಳುವ ತಿಮ್ಮರಸ, ಗೋವಿಂದರಾಜಯ್ಯ ಮತ್ತಿತರರನ್ನು ಭೇಟಿಮಾಡಿದುದನ್ನು ಉಲ್ಲೇಖಿಸಿರುವಂತೆ ತೋರುತ್ತದೆ ದುರ್ದೈವದಿಂದ ಈ ಶಾಸನ ಛಿನ್ನವಾಗಿದ್ದು, ಅವರ ಭೇಟಿಯ ಉದ್ದೇಶವಾಗಲೀ ಅದರ ಪರಿಣಾಮವಾಗಲೀ ತಿಳಿದುಬರುವುದಿಲ್ಲ

ಅಚ್ಯುತರಾಯನ ಶಾಸನಗಳಲ್ಲಿ ಕ್ರಿ ಶ ೧೫೩೧ಕ್ಕೆ ಸೇರುವ ಚಾ ನ ೪೦೧ನೆಯ ನಂಜೇದೇವರಪುರದ ಶಾಸನವೇ ಪ್ರಾಚೀನತಮವಾದುದು ಅದು ಅರಸನನ್ನು ನೇರವಾಗಿ ಉಲ್ಲೇಖಿಸಿಲ್ಲ, ಆದರೆ ಆತನ ನಿರೂಪದ ಮೇರೆಗೆ ಪೆರುಮಾಳ ಅಧಿಕಾರಿಅಯ(?)ನು ಉಯಂಬಳಿಸ್ಥಳದ ದಣಾಯಕನಪುರ ಎಂಬ ಗ್ರಾಮವನ್ನು ದತ್ತಿ ಬಿಟ್ಟುದನ್ನು ತಿಳಿಸುತ್ತದೆ ಪೆರುಮಾಳ ಅಧಿಕಾರಿ ಚಲ್ಲಯ್ಯನಿಗೆ ಪುಣ್ಯವಾಗಬೇಕೆಂದು ಗರಿಗನಾಯಕನ ಮಗ ದಳವಾಯಿ ರಂಗನಾಯಕನು ಉಮ್ಮತ್ತೂರ ರಂಗನಾಥದೇವರಿಗೆ ದತ್ತಿ ಬಿಟ್ಟ ಸಂಗತಿಯನ್ನು ಕ್ರಿ ಶ ೧೫೩೧ರ ಉಮ್ಮತ್ತೂರು ಗ್ರಾಮದ ಚಾ ನ ೮೯ ರಲ್ಲಿ ನಿರೂಪಿಸಿದೆ ಈ ಪೆರುಮಾಳ ಅಧಿಕಾರಿ ಚಲ್ಲಯ್ಯನು ಕೃಷ್ಣರಾಯಮಹಾರಾಯನ ಕಾರ್ಯಕರ್ತನೆಂದು ಇಲ್ಲಿ ಹೇಳಿದೆ ಆದರೆ ಶಾಸನದ ಕಾಲದ ಪ್ರಕಾರ ಅಚ್ಯುತರಾಯ ಆಳುತ್ತಿದ್ದನೆಂದಾಗುತ್ತದೆ ಮೇಲೆ ಗಮನಿಸಿದ ಪೆರುಮಾಳ ಅಧಿಕಾರಿಅಯನೆ ಈತನೆಂದಿಟ್ಟುಕೊಂಡಲ್ಲಿ ಈತನು ಅಚ್ಯುತರಾಯನ ಕಾಲದಲ್ಲೂ ಅಧಿಕಾರದಲ್ಲಿ ಮುಂದುವರಿದನೆಂದು ಭಾವಿಸಬಹುದಾಗಿದೆ ಚಾ ನ ೪೦೧ ಹುಟ್ಟಿದ ೮ ತಿಂಗಳ ನಂತರದ ಕಾಲದ್ದು ಈ ಚಾ ನ ೮೯

ಹಿರಿಯ ಸಿಂಗಣನಾಯಕನ ಮಗ ಚಿಕ್ಕ ಸಿಂಗಣನಾಯಕನಿಗೆ ಅರಸ ಹದಿನಾಡಸೀಮೆಯ ನಾಯಕತನವನ್ನು ದಯಪಾಲಿಸಿದ್ದ ಈ ಅಧಿಕಾರಿಯನ್ನು ಅರಸನ 'ಪ್ರಿಯಪುತ್ರ'ನೆಂಬುದಾಗಿ ವರ್ಣಿಸಿದೆ ಈ ಶಬ್ದದ ಪದಶಃ ಅರ್ಥವನ್ನು ತೆಗೆದುಕೊಳ್ಳುವಂತಿಲ್ಲ ಈ ಶಾಸನದ ಕಾಲ ಕ್ರಿ ಶ ೧೫೩೧ ಆದರೆ ಕ್ರಿ ಶ ೧೫೩೫ಕ್ಕೆ ಸೇರುವ ಕೊ ಗಾ ೫೮ ರಲ್ಲಿ ರಾಮಪ್ಪಯ್ಯನೆಂಬ ಇನ್ನೊಬ್ಬ ಅಧಿಕಾರಿಯ ಉಲ್ಲೇಖವಿದ್ದು, ಇಲ್ಲಿ 'ಸಾಮ್ರಾಜ್ಯಧುರಂಧರ' ನೆಂದು ವರ್ಣಿತನಾಗಿರುವ ಅವನಿಗೆ ಹದಿನಾಡಸೀಮೆಯ ನಾಯಕತನವನ್ನು ಪಾಲಿಸಿದ್ದ ವಿಚಾರವನ್ನು ಹೇಳಿದೆ ಮೇಲೆ ಗಮನಿಸಿದ ಶಾಸನದ ಕಾಲಾನಂತರದ ನಾಲ್ಕುವರ್ಷಗಳಲ್ಲಿ ಅಧಿಕಾರದಲ್ಲಿ ಬದಲಾವಣೆಯುಂಟಾಯಿತೆಂಬುದು ಸ್ಪಷ್ಟ ರಾಮಪ್ಪಯ್ಯನಿಗೆ ಕಾರ್ಯಕರ್ತನಾದ ಮಾದಪ್ಪಯ್ಯನು ಮಲ್ಲಿಕಾರ್ಜುನದೇವರಿಗೆ ನೀಡಲಾಗಿದ್ದ ಭೂಮಿಗಳನ್ನೂ ಗ್ರಾಮಗಳನ್ನೂ ಊರ್ಜಿತಗೊಳಿಸಿದ ಈ ರಾಮಪ್ಪಯ್ಯ ಕೊಂಡವೀಡಿನ ರಾಜ್ಯಪಾಲ ಬಯಕಾರ ರಾಮಪ್ಪಯ್ಯನಿಂದ ಭಿನ್ನನೆಂಬುದು ಖಚಿತ

ಕ್ರಿ ಶ ೧೫೩೬ರ ಚಾ ನ ೩೦೨ರಲ್ಲಿ ಅರಸನ ನಿರೂಪದ ಮೇರೆಗೆ ಸೋಮಶಿಲಾದೇಉ ರಾಉತ್ತರಾಯ ಮಹಾಪಾತ್ರ ಅರಸು ತೆರಕಣಾಂಬೆಯ ತಿರುಮಲದೇವರಿಗೆ ಗ್ರಾಮ ಮತ್ತು ಭೂಮಿಗಳನ್ನು ದತ್ತಿಬಿಟ್ಟುದನ್ನು ನಿರೂಪಿಸಿದೆ ದಾನನೀಡಿದ ಗ್ರಾಮ ಇವನ ನಾಯಕತನಕ್ಕೆ ಸೇರಿದ ತೆರಕಣಾಂಬೆಯ ಮೂಡಣ ಸೀಮೆಗೆ ಸೇರಿತ್ತೆಂದು ಹೇಳಿದೆ ಮಹಾಪಾತ್ರ ಎಂದು ಅಂತ್ಯಗೊಳ್ಳುವ ಹೆಸರಿನಿಂದಾಗಿ ಈತ ಒರಿಸ್ಸಾದಿಂದ ಬಂದವನಿರಬೇಕೆಂದು ಭಾವಿಸುವುದಾದಲ್ಲಿ, ಕೃಷ್ಣರಾಯನ ಕಳಿಂಗದ ಮೇಲಿನ ಯಶಸ್ವೀ ದಂಡಯಾತ್ರೆಯ ಅನಂತರ ಈತ ಅಥವಾ ಈತನ ಪೂರ್ವಜರು ಅರಸನ ಅನುಯಾಯಿಗಳಾಗಿ ಬಂದು ಇಲ್ಲಿನ ಸಾಮ್ರಾಜ್ಯದಲ್ಲಿ ಉನ್ನತ ಅಧಿಕಾರಗಳನ್ನು ಪಡೆದಿರಬಹುದಾದ ಸಾಧ್ಯತೆ ಇದೆ ದಾನ ನೀಡಿದ ಗ್ರಾಮವು ಇವನು ಆಳುತ್ತಿದ್ದ ಪ್ರದೇಶದಲ್ಲಿತ್ತು, ತೆರಕಣಾಂಬಿ ಅಥವಾ ಕುಡಗಲೂರು ಹೊಯಿಸಣದೇಶದ ಬಡಗನಾಡೆಂಬ ಇನ್ನೊಂದು ವಿಭಾಗಕ್ಕೆ ಸೇರಿತ್ತು

ರಾಮಾಭಟ್ಟಯ್ಯ ಅಚ್ಯುತರಾಯನ ಕೈಕೆಳಗಿನ ಉನ್ನತ ಅಧಿಕಾರಿಗಳಲ್ಲೊಬ್ಬನಾಗಿದ್ದನೆಂದು ತಿಳಿದುಬರುತ್ತದೆ ಈ ಅಧಿಕಾರಿಯ ನಿರೂಪದ ಮೇರೆಗೆ ಹದಿನಾಡನ್ನಾಳುತ್ತಿದ್ದ ಯೆಲಪ್ಪಯ್ಯನು ಅಣಿಲೇಶ್ವರದೇವರಿಗೆ ದತ್ತಿ ನೀಡಿದ (ಚಾ ನ ೨೬೯) ಕ್ರಿ ಶ ೧೫೩೯ರ ಕೊ ಗಾ ೮ ರಲ್ಲಿ ಈ ರಾಮಾಭಟ್ಟಯ್ಯನನ್ನು ಭುಜಬಲಪ್ರತಾಪನೆಂಬುದಾಗಿ ವರ್ಣಿಸಿದೆ ಈ ಶಾಸನ ಸ್ವಾರಸ್ಯಕರ ಘಟನೆಯೊಂದನ್ನು ನಿರೂಪಿಸುತ್ತದೆ ಆದರೆ ಅದರ ವಿವರಗಳು ಸಾಕಷ್ಟು ಸ್ಪಷ್ಟ ವಾಗಿಲ್ಲ ಈ ರಾಮಾಭಟ್ಟಯ್ಯ ಸಂಬಳಸರತಿಗಾಗಿ ೩೦ ವರಹಗಳನ್ನು 'ತೆಲುಗಾಣ್ಯದ' ಅವರದಲ್ಲಿ ಎಂದರೆ ಬಹುಶಃ ತುಮುಲವಾದಾಗ ಸಂಗ್ರಹಿಸಿದಂತೆ ತೋರುತ್ತದೆ ತೆಲುಗಾಣ್ಯ ಎಂಬ ಶಬ್ದದ ಖಚಿತ ಅರ್ಥವೇನೆಂಬುದು ಸ್ಪಷ್ಟವಾಗಿಲ್ಲ ಕುಂತೂರಿನಲ್ಲಿ ಯಾವುದೋ ಗಲಭೆಯ ಪರಿಣಾಮವಾಗಿ ಗೊಂದಲವುಂಟಾಯಿತೆಂದು ಗೊತ್ತಾಗುತ್ತದೆ ಈ ಗ್ರಾಮವು ವೀರಶೈವ ಮಠವೊಂದಕ್ಕೆ ಸರ್ವಮಾನ್ಯವಾಗಿ ಸೇರಿದುದಾಗಿತ್ತು ಸಂಬಳ ಸರತಿಯಂಥ ತೆರಿಗೆಗಳನ್ನು ಈ ಗ್ರಾಮ ನೀಡಬೇಕಾ ಗಿರಲಿಲ್ಲವೆಂಬುದನ್ನು ಇದು ಸೂಚಿಸುತ್ತದೆ ಆದರೆ ಆಗಿನ ಗೊಂದಲ ರಾಮಾಭಟ್ಟಯ್ಯನು ಅದನ್ನು ಸಂಗ್ರಹಿಸುವುದಕ್ಕೆಡೆ ಮಾಡಿಕೊಟ್ಟಿತು ಹಾಗೆ ಸಂಗ್ರಹಿಸಿದ ಮೊತ್ತದೊಂದಿಗೆ ಹಿಂದಿರುಗುತ್ತಿರುವಾಗ ರಾಮಾಭಟ್ಟಯ್ಯನು ವೀರಶೈವ ಗುರು ಸಾಲೂರ ನಂಜಯ್ಯದೇವನನ್ನು ಭೇಟಿಯಾದಂತೆ ತೋರುತ್ತದೆ ಆ ಗುರು ರಾಮಾಭಟ್ಟಯ್ಯನನ್ನು ಆಶೀರ್ವದಿಸಿದನೆಂದು ಶಾಸನತಿಳಿಸುತ್ತದೆ ಬಹುಶಃ ಆ ಗುರುವಿಗೆ ಕುಂತೂರಲ್ಲಿ ನಡೆದ ಘಟನೆ ತಿಳಿದುಬಂದಿರಬಹುದು ಇತರ ವಿವರಗಳು ತಿಳಿದು ಬರುವುದಿಲ್ಲ ಪ್ರಾಯಶಃ ಈ ಭೇಟಿಯ ಫಲವಾಗಿಯೇ ರಾಮಾಭಟ್ಟಯ್ಯನು ಮೊತ್ತವನ್ನು ಹಿಂದಿರುಗಿಸಿ ಆ ಗ್ರಾಮಕ್ಕೆ ಸಂಬಳ, ಸರತಿ, ಕಾಣಿಕೆ, ಬೆಡಿಗೆ, ವರು(?), ವಿರಾಡ ಮುಂತಾದ ತೆರಿಗೆಗಳಿಂದ ವಿನಾಯಿತಿ ನೀಡಿ, ಅದನ್ನು ಸರ್ವಮಾನ್ಯ ವಾಗಿ ಬಿಟ್ಟು ಶಾಸನವೊಂದನ್ನು ಹಾಕಿಸಿದನು

ವಿಜಯನಗರ ಸಾಮ್ರಾಜ್ಯದ ಈ ಭಾಗದಲ್ಲಿ ಸದಾಶಿವರಾಯನ ಅತಿಪ್ರಮುಖ ಮಾಂಡಲಿಕನೆಂದರೆ ಮಹಾ ಮಂಡಲೇಶ್ವರ ರಾಮರಾಜತಿರುಮಲರಾಜಯ್ಯದೇವ ಕ್ರಿ ಶ ೧೫೪೪ರ ಚಾ ನ ೨೫೪ರಲ್ಲಿ ಈತನ ಹೆಸರಿದೆ ಕ್ರಿ ಶ. ೧೫೪೫ರ ತೇದಿ ಇರುವ ಚಾ ನ ೯೫ ಮತ್ತು ಚಾ ನ ೨೧೭ ಹಾಗೂ ೧೫೫೧ರ ಚಾ ನ ೩೧೫ ಮತ್ತು ಕೊ ಗಾ ೮೯ ರಲ್ಲಿ ಉಲ್ಲೇಖಗೊಂಡಿರುವವನೂ ಈತನೇ ಆಗಿರಬೇಕು ಈತನ ಮಗ ರಾಮರಾಜಯ್ಯದೇವನು ಕ್ರಿ ಶ ೧೫೬೯ರಲ್ಲಿ ಹದಿನಾಡಸೀಮೆಯ ಶಿವನಸಮುದ್ರಸ್ಥಳದ ಕೊಳಗಾಲಸ್ಥಳಕ್ಕೆ ಸೇರಿದ ಹಿರಿಯೂರು ಗ್ರಾಮವನ್ನು ಆ ಸೀಮೆಯ ಪ್ರಭು ವಾದ ರಾಮರಾಜನಾಯಕನಿಗೆ ಪಲ್ಲಕ್ಕಿಯ ಉಂಬಳಿಯಾಗಿ ಬಿಟ್ಟಿರುವುದು ಕಂಡುಬರುತ್ತದೆ (ಕೊ ಗಾ ೧) ಕ್ರಿ ಶ ೧೫೭೦ರ ಚಾ ನ ೧೭೦ರಲ್ಲಿಯೂ ಇವರಿಬ್ಬರೂ ದಾನಿ ಹಾಗೂ ಪ್ರತಿಗ್ರಹಿಗಳಾಗಿ ಉಲ್ಲೇಖಿತರಾಗಿದ್ದಾರೆ ಈ ಶಾಸನದ ರಾಜಯದೇವನನ್ನು ರಾಮರಾಜತಿರುಮಲರಾಜಯ್ಯನ ಕಾರ್ಯಕರ್ತನೆಂದು ವರ್ಣಿಸಲಾಗಿದೆ

೧೫೭೩ರ ಯಳಂ ೨೦೮ರಲ್ಲಿ ಚಾಮರಸವೊಡೆಯನು ಜಗದೇವರಾಯನ ಕಾರ್ಯಕರ್ತನೆಂದು ಹೇಳಿದೆ ಈ ಜಗದೇವರಾಯನು ಕ್ರಿ ಶ ೧೫೭೮ರ ಗಣಿಗನೂರ ಶಾಸನೋಕ್ತ (ಯಳಂ ೧೬೯) ಜಗದೇಕರಾಯವೊಡೆಯನೇ ಆಗಿರಬೇಕು ದೇವಗೌಡನನ್ನು ಸಂಜರಖಾನನೆಂಬುವನು ಅನ್ಯಾಯವಾಗಿ ಕೊಂದನೆಂದು ಮತ್ತು ಈ ಸಂಗತಿಯನ್ನು ದೀವಾಣದವೊಡೆಯನು ರಾಯವೊಡೆಯನಿಗೆ ತಿಳಿಸಿದನೆಂದು ಈ ಶಾಸನ ಹೇಳುತ್ತದೆ ಮೃತಿಹೊಂದಿದ ದೇವಗೌಡನ ಮಗ ಚಾಮರಸವೊಡೆಯನಿಗೆ ರಕ್ತಕೊಡಗಿಯಾಗಿ ಆರು ಗ್ರಾಮಗಳನ್ನೊಳಗೊಂಡ (ನಾಲ್ಕನ್ನು ಮಾತ್ರ ಹೆಸರಿಸಲಾಗಿದೆ) ಗಣಿಗ ನೂರ ಸ್ಥಳವನ್ನು ಕೊಡಲಾಯಿತು ಇವು ಜಗದೇಕರಾಯನ ನಾಯಕತನಕ್ಕೆ ಸಲ್ಲುವ ಹದಿನಾಡಸೀಮೆಗೆ ಸೇರಿದ್ದವು ೨ ವರ್ಷಗಳ ಅನಂತರ ಹುಟ್ಟಿದ ಯಳಂ ೧೮೦ರಲ್ಲಿ ಬಹುಶಃ ಇದೇ ಪ್ರತಿಗ್ರಹಿಯನ್ನು ಉಲ್ಲೇಖಿಸಲಾಗಿದೆ ಇಲ್ಲಿ ಈತ ನನ್ನು ದೇವರುಗೌಡನ ಮಗ ಚಾಮರಸಣ್ಣನೆಂದು ಕರೆಯಲಾಗಿದೆ ಆದರೆ ಇಲ್ಲಿ ಆತ ಹದಿನಾಡಸೀಮೆಯ ಪ್ರಭು ವಾಗಿರುವುದನ್ನು ಕಾಣುತ್ತೇವೆ ಮೇಲೆ ಗಮನಿಸಿದ ಯಳಂ ೨೦೮ರ ಚಾಮರಸವೊಡೆಯನೂ ಈತನೇ ಆಗಿರಬಹುದು ಹಾಗಿದ್ದಲ್ಲಿ ಕ್ರಿ ಶ ೧೫೭೩ರಲ್ಲಿ ಈತ ಜಗದೇಕರಾಯನ ಕಾರ್ಯಕರ್ತನಾಗಿದ್ದನೆಂದು, ಮಾರನೆಯವರ್ಷ ನೆತ್ತರು ಗೊಡಗೆಯಾಗಿ ಗಣಿಗನೂರು ಸ್ಥಳವನ್ನು ಪಡೆದನೆಂದು ಮತ್ತು ೧೫೭೭ರ ಹೊತ್ತಿಗೆ ಹದಿನಾಡಸೀಮೆಯ ಪ್ರಭುವಾಗಿ ಉನ್ನತಿಗೇರಿದ್ದನೆಂದು ಹೇಳಬಹುದಾಗಿದೆ

ಕ್ರಿ ಶ ೧೫೮೫ರಲ್ಲಿ ಅರವೀಡುಮನೆತನದ ಇಮ್ಮಡಿ ಶ್ರೀರಂಗರಾಯನ ಕೈಕೆಳಗೆ ದೇವಪ್ಪಗೌಡನ ಮಗ ರಾಮರಾಜ ನಾಯಕನು ಈ ಸೀಮೆಯ ಪ್ರಭುವಾಗಿದ್ದ ಈತ ಗುಂಡಸಾಗರದ ಅಮೃತೇಶ್ವರ ದೇವಾಲಯವನ್ನು ಜೀರ್ಣೋದ್ಧಾರ ಗೊಳಿಸಿದ (ಕೊ ಗಾ ೮೦) ಒಂದನೇ ವೆಂಕಟಪತಿಯ ಕೈಕೆಳಗೂ ಕ್ರಿ ಶ ೧೫೯೩ರಲ್ಲಿ ಈತ ಅಧಿಕಾರದಲ್ಲಿ ಮುಂದುವರಿ ದುದನ್ನು ಕಾಣುತ್ತೇವೆ (ಚಾ ನ ೨೧೬) ಈತ ಶಿವರಾತ್ರಿಯದೇವನ ಶಿಷ್ಯನಾದ ಸುತ್ತೂರಮಠದ ಚೆನ್ನಬಸವರಾಜ

ದೇವನಿಗೆ ಹಸುರಹಳ್ಳಿಗ್ರಾಮವನ್ನು ದಾನನೀಡಿದ ಕ್ರಿ ಶ ೧೫೮೬ರಲ್ಲಿ ಈ ರಾಮರಾಯನಾಯಕನು ತನ್ನೊಡೆಯನ ತಿರುಮಲ ಎಂಬ ಹೆಸರನ್ನು ತನ್ನ ಮಗನಿಗಿಟ್ಟಿದ್ದಕ್ಕಾಗಿ ಮಹಾಮಂಡಲೇಶ್ವರ ರಾಮರಾಜತಿರುಮಲರಾಜಯ್ಯದೇವನಿಂದ ಹಲವು ಗ್ರಾಮಗಳನ್ನೊಳಗೊಂಡ ದತ್ತಿಯೊಂದನ್ನು ಪಡೆದನೆಂದು ತಾಯೂರು ಶಾಸನದಿಂದ ನಮಗ ಗೊತ್ತಾಗುತ್ತದ [1] ಈ ತಿರುಮಲನು ಕ್ರಿ ಶ ೧೬೦೪ರ ಹೊತ್ತಿಗೆ ಸಾಕಷ್ಟು ಬೆಳೆದವನಾಗಿದ್ದನೆಂದು ಮತ್ತು ತನ್ನ ತಂದೆಯ ಅಧಿಕಾರವನ್ನು ಪಡೆದಿದ್ದನೆಂದು ಕೊ ಗಾ ೨೮ರಿಂದ ತಿಳಿದುಬರುತ್ತದ ಈ ಹದಿನಾಡಸೀಮೆಯನ್ನು ಚನ್ನಂಜಯನ ಮಗನಾದ ನಂಜ ರಾಜವೊಡೆಯನು ಪಾಲಿಸುತ್ತಿದ್ದನೆಂದು ಹೇಳಲಾಗಿದ, ಕ್ರಿ ಶ ೧೬೧೩ರಲ್ಲಿ ಆ ಸೀಮೆಯ ಪ್ರಭುವಾಗಿ ಆತನೂ ಅಧಿಕಾರ ದಲ್ಲಿ ಮುಂದುವರಿದಿದ್ದನು (ಚಾ ನ ೨೪೬)

ಕ್ರಿ ಶ ೧೬೦೫, ಏಪ್ರಿಲ್ ೧೧ರ ತೇದಿಯಿರುವ, ಈ ಅರಸನ ( ಒಂದನೇ ವೆಂಕಟಪತಿ ) ಚಾಮರಾಜನಗರದ ಶಾಸನವು (ಚಾ ನ ೧) ಸ್ವಾರಸ್ಯಕರ ವ್ಯವಹಾರವೊಂದನ್ನು ಉಲ್ಲೇಖಿಸುತ್ತದೆ ಉಮ್ಮತ್ತೂರು ಸೀಮೆಯ ಉಯ್ಯಂಬಳ್ಳಿ ಸ್ಥಳಕ್ಕೆ ಸಲ್ಲುವ ಹಂಗರೆಪುರ ಗ್ರಾಮವನ್ನು ಕಮ್ಮರವಳ್ಳಿಯ ವೊಡೆಯರು ಶ್ರೋತ್ರಿಯಗುತ್ತಿಗೆಯಾಗಿ ಅನುಭವಿಸು ತ್ತಿದ್ದರು, ಅದರ ಕಂಡಾಯವನ್ನು ಅರಿಕೊಠಾರದ ಪ್ರಭುಗಳಿಗೆ ಸಲ್ಲಿಸಲಾಗುತ್ತಿತ್ತು ಈಗ ಪ್ರಭು ಚಂದ್ರಶೇಖರವೊಡೆಯ ಹಾಗೂ ಕಮ್ಮರವಳ್ಳಿಯ ಮಲರಾಜವೊಡೆಯರು ಪರಸ್ಪರ ಒಪ್ಪಿ ಈ ಗ್ರಾಮವನ್ನು ಸರ್ವಸ್ವಾಮ್ಯಸಹಿತವಾಗಿ ಅರಿಕೊಠಾರದ (ಈಗಿನ ಚಾಮರಾಜನಗರ) ವೀರಭದ್ರದೇವರಿಗೆ ದಾನ ನೀಡಿದರು

ಮಹಾಮಂಡಲೇಶ್ವರ ರಾಮರಾಜಯ ತಿರುಮಲರಾಜಯ್ಯದೇವ ಮಹಾಅರಸನ ಕ್ರಿ ಶ ೧೬೦೭ ಮತ್ತು ೧೬೧೦ರ ತೇದಿ ಇರುವ ಎರಡು ಶಾಸನಗಳು (ಕ್ರಮವಾಗಿ ಪಿ ಪ ೫೯ ಮತ್ತು ಚಾ ನ ೩೦೭) ಒಂದೇ ರೀತಿಯಾಗಿವೆ ಈ ಪ್ರಭು ಒಂದನೇ ವೆಂಕಟಪತಿಯ ಅಣ್ಣ ರಾಮನ ಮಗನೆಂಬುದನ್ನು ಈಗಾಗಲೇ ಗಮನಿಸಿದ್ದೇವೆ [2] ನಾವು ಪರಿಶೀಲಿಸುತ್ತಿರುವ ಪ್ರಸ್ತುತ ಶಾಸನಗಳಲ್ಲಿ ಉಕ್ತನಾಗಿರುವ ತಿರುಮಲ ಈತನೇ ಮೊದಲನೆಯ ಶಾಸನದಿಂದ (ಪಿ ಪ ೫೯) ಈತನ ತಂದೆ ರಾಮರಾಜಯ್ಯ ಹಾಗೂ ತಾಯಿ ತಿಮ್ಮಾಜಮ್ಮರೆಂದು ತಿಳಿದುಬರುತ್ತದೆ ಮೇಲೆ ಗಮನಿಸಿದ ಸದಾಶಿವ ರಾಯನ ಶಾಸನಗಳಲ್ಲಿ ಕಂಡುಬರುವ ರಾಮರಾಜತಿರುಮಲರಾಜಯ್ಯದೇವನನ್ನು ಗುರುತಿಸಲು ಸಾಧ್ಯವಾಗಿಲ್ಲ

ಕ್ರಿ ಶ ೧೪೬೭ಕ್ಕೆ ಸೇರುವ ನಾಲ್ವಡಿ ಶ್ರೀರಂಗರಾಯನ ಶಾಸನವೊಂದಿದೆ (ಯಳಂ ೧೭೦) ತಿರುಮಲರಾಜ ನಾಯಕನ ಮಗ ಲಿಂಗರಾಜಯ್ಯ ಹದಿನಾಡಸೀಮೆಯ ಪ್ರಭುವೆಂದು ಈ ಶಾಸನದಲ್ಲಿ ಹೇಳಿದೆ

## ಮೈಸೂರಿನ ಒಡೆಯರು

ಮೈಸೂರಿನ ಒಡೆಯರ ಪ್ರಾಚೀನತಮ ಶಾಸನವು ಕಂಠೀರವ ನರಸರಾಜನದು ಹೊಂಗನೂರು ಸ್ಥಳಕ್ಕೆ ಸಲ್ಲುವ ಕೆಲವು ಗ್ರಾಮಗಳನ್ನು ಕಾಶಿಧರ್ಮವಾಗಿ ದತ್ತಿ ನೀಡಿದ ವಿಷಯವನ್ನು ನಿರೂಪಿಸುವ ಹೊಂಗನೂರು ಗ್ರಾಮದಲ್ಲಿ ಹೊಸ ದಾಗಿ ದೊರೆತಿರುವ ಈ ಶಾಸನದ (ಚಾ ನ ೧೭೦) ಕಾಲ ಕ್ರಿ ಶ ೧೬೪೮ ಇದೇ ಗ್ರಾಮದಲ್ಲಿ ದೊರೆತಿರುವ ಚಾ ನ ೧೬೯ ಮತ್ತು ೧೭೧ನೆಯ ಶಾಸನಗಳೂ ಈ ಅರಸನ ಕಾಲದವೇ ಮೊದಲನೆಯ ಶಾಸನವು ಹೊಸದಾಗಿ ದೊರೆತಿದ್ದು ಸಂಸ್ಕೃತದಲ್ಲಿದೆ ಶಾಸನದ ಮೇಲ್ಭಾಗವು ಅಲ್ಲಲ್ಲಿ ಸವೆದು ಹೋಗಿರುವುದರಿಂದ ಮತ್ತು ಉಳಿದ ಭಾಗ ಕೊಳದ ನೀರಿನಲ್ಲಿ ಮುಳುಗಿರುವುದರಿಂದ, ಪ್ರಾಯಶಃ ಅಗ್ರಹಾರವೊಂದರ ದಾನದ ವಿವರಗಳು ನಷ್ಟವಾಗಿವೆ

ಸಿಂಗನಲ್ಲೂರಿನ ಕೊ ಗಾ ೫೨ ಚಿಕ್ಕದಾದ ಸ್ವಲ್ಪ ತ್ರುಟಿತವಾದ ಶಾಸನವಾಗಿದ್ದು ಶ್ರೀರಂಗರಾಯನ ನಿರೂಪದಿಂದ ದೇವರಾಜಒಡೆಯನು ಆಳುತ್ತಿದ್ದುದನ್ನು ಉಲ್ಲೇಖಿಸುತ್ತದೆ ಶಾಸನದ ಕಾಲ ಕ್ರಿ ಶ ೧೬೫೯ರ ನವೆಂಬರ್ ೧೭ ಇದು ಕಂಠೀರವನರಸರಾಜನ ಕೊನೆಯ ವರ್ಷವೆಂಬುದು ನಮಗೆ ತಿಳಿದಿದೆ ಹಾಗೂ ಪ್ರಸ್ತುತ ಶಾಸನದಿಂದ ಈ ಕಾಲಕ್ಕೆ ಸ್ವಲ್ಪ ಮೊದಲೇ ಕಂಠೀರವನು ಮರಣಹೊಂದಿದ್ದನೆಂಬುದು ಮತ್ತಷ್ಟು ಸ್ಪಷ್ಟವಾಗುತ್ತದೆ ಶ್ರೀರಂಗರಾಯನ ಎಂದರೆ ಆರವೀಡು ಮನೆತನದ ನಾಲ್ವಡಿ ಶ್ರೀರಂಗರಾಯನ ನಿರೂಪದಿಂದ ದೇವರಾಜನು ರಾಜ್ಯವಾಳುತ್ತಿದ್ದನೆಂದು ಹೇಳಿರುವುದು ಕೇವಲ ರಾಜ ನಿಷ್ಠೆಯ ಪ್ರಜ್ಞೆಯೇ ಹೊರತು ಬೇರೆಯೇನಲ್ಲ ಈ ಶ್ರೀರಂಗರಾಯ ಕೇವಲ ಹೆಸರಿಗೆ ಮಾತ್ರ ಅರಸನಾಗಿದ್ದ ಅಷ್ಟೇ

[1] ಎಕ III (1974) ಸಂ ಗೂ 208

[2] ಎ ಕ III (1974) ಪೀಠಿಕೆ ಪು ೬೬

ಅಲ್ಲ ಕಂಠೀರವ ನರಸರಾಜನ ಆಶ್ರಯವನ್ನೇ ಪಡೆದಿದ್ದ ಆತ ಶ್ರೀರಂಗಪಟ್ಟಣದ ಆಸ್ಥಾನದಲ್ಲೇ ಇನ್ನೂ ಇದ್ದುದರಿಂದ ದೇವರಾಜ ಈ ರಾಜನಿಷ್ಠೆಯನ್ನು ತೋರಿಸಿರಬಹುದಾದ ಸಾಧ್ಯತೆಯಿದೆ ಈ ದೇವರಾಜ ದೊಡ್ಡದೇವರಾಜನೇ ಇರಬೇಕೆಂದು ತೋರುತ್ತದೆ ಈತ ರಾಜ್ಯವಾಳಲೇ ಇಲ್ಲವೆಂಬ ಅಭಿಪ್ರಾಯವನ್ನು ಕೆಲವು ವಿದ್ವಾಂಸರು ತಳೆದಿರುವುದನ್ನು ಈ ಹಿಂದೆ ಗಮನಿಸಲಾಗಿದೆ [1] ದೇವರಾಜವೊಡೆಯರಯ್ಯನಿಗೆ ಮೈಸೂರ ದೇವರಾಜವೊಡೆಯನೆಂಬ ಮಗನಿದ್ದನೆಂಬುದನ್ನು, ಆಗ ಎಂದರೆ ಕ್ರಿ ಶ ೧೬೬೮ರಲ್ಲಿ ಅವನು ಆಳುತ್ತಿದ್ದನೆಂಬುದನ್ನೂ ಕೇತಹಳ್ಳಿ ಶಾಸನವು (ಚಾ ನ ೩೭೯) ಸ್ಪಷ್ಟವಾಗಿ ಸಾರುತ್ತದೆ ಮುಪ್ಪಿನ ದೇವರಾಜನ ನಂತರ ಅಧಿಕಾರಕ್ಕೆ ಬಂದವನು ಈ ದೊಡ್ಡದೇವರಾಜವೊಡೆಯನಾಗಿರದೆ ಅವನ ಚಿಕ್ಕಪ್ಪನಾದ ದೇವರಾಜವೊಡೆಯನೆಂಬ ಹೆಸರನ್ನೇ ಹೊಂದಿದ್ದ ಕೆಂಪದೇವಯ್ಯ ಎಂದು ಸೂಚಿಸಿದ ವಿದ್ವಾಂಸರ ಅಭಿಪ್ರಾಯಕ್ಕೆ ಇದು ವಿರುದ್ಧವಾಗಿದೆ ಈ ಶಾಸನವು ಅಮೃತಮ್ಮನನ್ನು ರಾಜಮಾತೆ ಎಂದು ಉಲ್ಲೇಖಿಸುತ್ತದೆ ಈಕೆ ಮೈಸೂರಿನಲ್ಲಿ ಹೊಸದಾಗಿ ಕಟ್ಟಿಸಿದ ವೀರಶೈವ ಮಠವಾದ ಮಹತ್ತಿನ ಮಠಕ್ಕೆ ಅರಸನು ಗ್ರಾಮವೊಂದನ್ನು ದತ್ತಿ ನೀಡಿದ

ದೇವರಾಜನ ಮಗ ಯುವರಾಜ ಕಂಠೀರವನು ದಾನವೊಂದನ್ನು ನೀಡಿದುದನ್ನು ಕ್ರಿ ಶ ೧೬೭೯ರ ತರೀಕಲ್ಲು ಗ್ರಾಮದ ಶಾಸನವು (ಹು ೩೨) ತಿಳಿಸುತ್ತದೆ ಅದೇ ವರ್ಷದಲ್ಲಿ ಈತ ಹೊಯಿಸಳನಾಡಿನ ಕೊತ್ತಾಗಾಲದ ಉಪಗ್ರಾಮ ಹೊರಮಠಳಿಯನ್ನು [2] ದಾನ ನೀಡಿದ ಅದೇ ನಾಡಿಗೆ ಸೇರಿದ ತರೀಕಲ್ಲು ಎಂಬ ಇನ್ನೊಂದು ಗ್ರಾಮವನ್ನು ಕಂಠೀರವ ಸಮುದ್ರ ಎಂಬ ಪ್ರತಿನಾಮಧೇಯದಿಂದ ದತ್ತಿ ಬಿಟ್ಟುದನ್ನು ಪ್ರಸ್ತುತ ಶಾಸನವು ತಿಳಿಸುತ್ತದೆ ಆದರೆ ಸ್ವಾರಸ್ಯದ ಸಂಗತಿಯೆಂದರೆ ಈ ನಾಡು (ಕಾವೇರೀ ಕಪಿನೀ ಮಧ್ಯವರ್ತಿಯಾದ ಹೊಸಣನಾಡು) ಆತನಿಗೆ ವಿಕ್ರಮಾರ್ಜಿತವಾಗಿ ಬಂದುದೆಂದು ಇಲ್ಲಿ ಹೇಳಿರುವುದು ಮಧುರೆಯ ನಾಯಕರ ವಿರುದ್ಧ ತನ್ನ ತಂದೆಯ ದಕ್ಷಿಣ ದಿಗ್ವಿಜಯ ಯಾತ್ರೆಯಲ್ಲಿ ಹೊರಟು, ಅವರಿಂದ ಈರೋಡ್ ಹಾಗೂ ಧಾರಾಪುರಗಳನ್ನು ಕಿತ್ತುಕೊಂಡು ಈತ ನಿರ್ವಹಿಸಿದ ಮಹತ್ವದ ಪಾತ್ರವನ್ನು ಇದು ಬಹುಶಃ ಸೂಚಿಸುತ್ತದೆ ೨೨ ಇತರ ಉಪಗ್ರಾಮಗಳನ್ನೊಳಗೊಂಡ ಈ ದತ್ತಿಯನ್ನು ೧೨೫ ವೃತ್ತಿಗಳಾಗಿ ವಿಂಗಡಿಸಿ ಅಲ್ಲಿ ನೆಲಸಿದ ಬ್ರಾಹ್ಮಣರಿಗೆ ದಾನ ನೀಡಲಾಯಿತು ವೃತ್ತಿಯನ್ನು ಸ್ವೀಕರಿಸಿದ ಮಹಾಜನರು ಒಂದು ವೃತ್ತಿಯನ್ನು ಲಕ್ಷ್ಮೀಕಾಂತದೇವರಿಗೆ ನೀಡಿದರು

ಮಹಾರಾಜಾಧಿರಾಜ ಮುಂತಾದ ಬಿರುದುಗಳನ್ನು ಧರಿಸಿದ್ದ ದೇವರಾಜವೊಡೇರೈಯ್ಯ ಕಗ್ಗುಂಡಿ(?) ಅಥವಾ ದೇವರಾಜಪುರ ಗ್ರಾಮದ ದಾನಿಯಾಗಿ ಕ್ರಿ ಶ ೧೬೭೨ರ ಪಿ ಪ ೧೧೨ರಲ್ಲಿ ಕಾಣಿಸಿಕೊಂಡಿದ್ದಾನೆ ಮೇಲೆ ಉಲ್ಲೇಖಿಸಿದ ಶಾಸನಗಳಲ್ಲಿ ಕಂಡುಬರುವ ಇದೇ ಹೆಸರಿನ ಅರಸನೇ ಇವನೆನ್ನಬಹುದು ಕ್ರಿ ಶ ೧೬೭೩ರ ವರೆಗೂ ಈತ ರಾಜ್ಯವಾಳಿದನು

ಚಾ ನ ೧೧ ಮೂರು ಹಲಗೆಗಳಿಂದ ಕೂಡಿದ ತಾಮ್ರಶಾಸನ ನಾಗರಿಲಿಪಿಯಲ್ಲಿರುವ ಇದರ ಭಾಷೆ ಸಂಸ್ಕೃತ ಹಾಗೂ ಕನ್ನಡ ಚಿಕ್ಕದೇವರಾಯನೆಂದು ಪ್ರಸಿದ್ಧನಾದ ಚಿಕ್ಕದೇವೇಂದ್ರನ ಈ ಶಾಸನದ ಕಾಲ ಕ್ರಿ ಶ ೧೬೭೫ ಈ ಅರಸ ತನ್ನ ತಂದೆಯ ಉತ್ತರಕ್ರಿಯಾದಿಗಳನ್ನು ಗಯಾದಲ್ಲಿ ಕೃಷ್ಣದೀಕ್ಷಿತ ಎಂಬುವನಿಂದ ಮಾಡಿಸಿ ಆವನಿಗೆ ತೆರಕಣಾಂಬಿ ಸೀಮೆಯಲ್ಲಿನ ಕಬ್ಬಿಲಿಗನಪುರ ಮತ್ತು ಹುಲ್ಲಾಣ ಎಂಬ ಎರಡು ಗ್ರಾಮಗಳನ್ನು ಅವಕ್ಕೆ ಕ್ರಮವಾಗಿ ಚಿಕ್ಕದೇವರಾಯಪುರ ಮತ್ತು ಕೃಷ್ಣಾಪುರ ಎಂದು ಪ್ರತಿನಾಮಕರಣ ಮಾಡಿ ದಾನವಿತ್ತ ಸಂಗತಿಯನ್ನು ನಿರೂಪಿಸುವುದು ಈ ಶಾಸನದ ಉದ್ದೇಶ ಕ್ರಿ ಶ ೧೫೧೩ರಿಂದ ೧೫೫೩ರ ವರೆಗೆ ರಾಜ್ಯವಾಳಿದ ಬೆಟ್ಟದ ಚಾಮೇಂದ್ರನಿಂದ ಆರಂಭಗೊಂಡು ಈ ಅರಸನ ವರೆಗಿನ ವಂಶಾವಳಿಯನ್ನೂ ಇದು ಒಳಗೊಂಡಿದ್ದು ಬೇರೆಡೆ ಬರುವ ಇದೇ ವಂಶಾವಳಿಯ (ಎಲ್ಲವೂ ಒಂದೇ ರೀತಿಯಲ್ಲಿಲ್ಲ) ರೀತಿಯಲ್ಲಿಯೇ ಇದೆ ಬೆಟ್ಟದ ಚಾಮನ ಮೂರನೆಯ ಮಗನಾದ ಚಾಮರಾಜನಿಗೆ ನಾಲ್ವರು ಮಕ್ಕಳು, ಹಿರಿಯವನು ರಾಜೇಂದ್ರನೆಂದು ಇತರ ವಂಶಾವಳಿಗಳಲ್ಲಿ ಹೇಳಿದೆ ಮೂರನೆಯ ಮಗ ದೇವರಾಜೇಂದ್ರನಿಗೆ ನಾಲ್ವರು ಮಕ್ಕಳು ಇವರೆಲ್ಲರಿಗೂ ದೇವರಾಜನೆಂಬ ಹೆಸರಿತ್ತು ಇವರಲ್ಲಿ ಜ್ಯೇಷ್ಠ ದೊಡ್ಡದೇವರಾಜ ಈತನ ಮಗನೇ ಪ್ರಸ್ತುತ ಶಾಸನೋಕ್ತ ದಾನಿ ಚಿಕ್ಕದೇವರಾಯ ಈ ದೊಡ್ಡದೇವರಾಜ ರಾಜ್ಯವಾಳುತ್ತಿದ್ದನೆಂಬುದನ್ನು ಗಮನಿಸಿದ್ದೇವೆ ಈತನ ಕಿರಿಯ ಮಗ ಕಂಠೀರವನು ತನ್ನ ತಂದೆಗೆ ರಾಜ್ಯಾಡಳಿತದಲ್ಲಿ ಸಹಾಯಕನಾಗಿದ್ದನೆಂಬುದು ಸ್ಪಷ್ಟ ನಾವು ಪರಿಶೀಲಿಸುತ್ತಿರುವ ಪ್ರಸ್ತುತ ಶಾಸನದಲ್ಲಿ ಚಿಕ್ಕದೇವರಾಯನು ಪಾಂಡ್ಯ, ಕೆಳದಿ ಹಾಗೂ ಬಿಜಾಪುರ ಅರಸರ ಮೇಲೆ ಸಾಧಿಸಿದ ವಿಜಯ ಹಾಗೂ ಅನಂತಗಿರಿ, ಸಕಲೇಶಪುರ, ಅರಕಲಗೂಡು, ಕೇತಸಮುದ್ರ, ಗೂಳೂರು, ತುಮಕೂರು ಇತ್ಯಾದಿ ಸ್ಥಳಗಳನ್ನು ಗದ್ದು

[1] ಅದೇ

[2] ಅದೇ ಪೆ ಕೋ 17

ಸಾಮ್ರಾಜ್ಯಕ್ಕೆ ಸೇರಿಸಿಕೊಂಡ ಸಂಗತಿಯನ್ನು ನಿರೂಪಿಸಲಾಗಿದೆ ಈ ಶಾಸನವನ್ನು ರಚಿಸಿದವನು 'ಚಿಕ್ಕದೇವರಾಜ ವಂಶಾವಳಿ'ಯ ಕರ್ತೃವಾದ ತಿರುಮಲಯಾರ್ಯ

ದೇವರಾಜವೊಡೆಯನ ಮಗ ದೇವರಾಜವೊಡೆಯರೈಯ್ಯನ ಆಳ್ವಿಕೆಯನ್ನು ಕ್ರಿ ಶ ೧೬೭೬ರ ಚಾ ನ ೩೮ ಉಲ್ಲೇಖಿಸುತ್ತದೆ ಈ ಅರಸ ಚಿಕ್ಕದೇವರಾಯನಲ್ಲದೆ ಬೇರೆಯಲ್ಲ

ಕ್ರಿ ಶ ೧೭೨೦ಕ್ಕೆ ಸೇರುವ ಸತ್ಯಾಗಾಲದ ಶಾಸನವು (ಕೊ ಗಾ ೩೧) ದೊಡ್ಡಕೃಷ್ಣರಾಜ ಎಂಬ ಹೆಸರಿನಿಂದ ಹೆಚ್ಚು ಪರಿಚಿತನಾದ ಕೃಷ್ಣರಾಜವೊಡೆಯನ ಆಳ್ವಿಕೆಯನ್ನು ಉಲ್ಲೇಖಿಸುತ್ತದೆ ಈತ ಚಿಕ್ಕದೇವರಾಯನ ಮೊಮ್ಮಗ

ಕ್ರಿ ಶ ೧೭೪೪ರ ಹರದನಹಳ್ಳಿ ತಾಮ್ರಶಾಸನವು (ಚಾ ನ ೩೯೧) ಇಮ್ಮಡಿ ಕೃಷ್ಣರಾಜನ ಆಳ್ವಿಕೆಗೆ ಸೇರಿದುದಾಗಿದೆ ಇದರಲ್ಲಿರುವ ರಾಜಮನೆತನದ ವಂಶಾವಳಿಯ ಪರಿಶೀಲನೆಯಿಂದ ಈ ಪೀಳಿಗೆ ಒಂದೇಸಮನಾಗಿ ಹರಿದುಬರದೆ ಆಗಾಗ್ಗೆ ನಿಂತುಹೋಗಿದ್ದು, ಇದೇ ವಂಶದ ಬೇರೆ ಬೇರೆ ಶಾಖೆಗೆ ಸೇರಿದವರು ಪಟ್ಟಕ್ಕೆ ಬರುತ್ತಿದ್ದರೆಂಬುದು ಸ್ಪಷ್ಟಪಡುತ್ತದೆ ಮೇಲೆ ಗಮನಿಸಿದ ಚಾ ನ ೧೧ರಲ್ಲಿ ಕೊಟ್ಟಿರುವ ವಂಶಾವಳಿಗಿಂತ ಇಲ್ಲಿಯದು ಭಿನ್ನವಾಗಿದೆ ಇವೆರಡೂ ಶಾಸನಗಳಲ್ಲಿ ವಂಶಾವಳಿ ಚಾಮರಾಜನಿಂದ ಆರಂಭವಾಗಿದೆ ಚಾ ನ ೧೧ರಲ್ಲಿ ಈ ಚಾಮರಾಜನನ್ನು ಬೆಟ್ಟದ ಚಾಮನೆಂದು ಕರೆದಿದೆ ಆದರೆ ಪ್ರಕೃತ ಶಾಸನ ಚಾಮನ ಮಕ್ಕಳಲ್ಲಿ ಮೂರನೆಯವನನ್ನು ಬೆಟ್ಟದ ಚಾಮನೆಂಬುದಾಗಿ ಹೆಸರಿಸಿದೆ ಈತನಿಗೆ ಚಾ ನ ೧೧ರ ಪ್ರಕಾರ ನಾಲ್ಕು ಮಕ್ಕಳಿದ್ದು ಅವರಲ್ಲಿ ರಾಜೇಂದ್ರನೆಂಬುವನು ಹಿರಿಯ ಇಲ್ಲಿ ಅವನನ್ನು ರಾಜನೆಂದು ಹೆಸರಿಸಿದ್ದು, ಅವನ ಉಳಿದ ಮೂವರು ಸೋದರರನ್ನು ಉಲ್ಲೇಖಿಸಿಯೇ ಇಲ್ಲ ಈ ರಾಜನು ತಿರುಮಲರಾಯನನ್ನು ಸೋಲಿಸಿ ಶ್ರೀರಂಗಪಟ್ಟಣವನ್ನು ವಶಪಡಿಸಿಕೊಂಡನೆಂದು ಹೇಳಲಾಗಿದೆ ಆರವೀಡು ಅರಸನ ಪರವಾಗಿ ಈ ಪ್ರದೇಶಗಳನ್ನು ಆಳುತ್ತಿದ್ದ ರಾಮರಾಜತಿರುಮಲರಾಜದೇವನೇ ಪ್ರಾಯಶಃ ಈ ತಿರುಮಲನಿರಬೇಕು ನರಸ ಹಾಗೂ ಚಾಮರಾಜ ಎಂಬುವರು ಕ್ರಮವಾಗಿ ರಾಜನ ಮಗ ಹಾಗೂ ಮೊಮ್ಮಗ ಅನಂತರ ಈ ಚಾಮರಾಜನ ವಂಶದಲ್ಲಿ ಇಮ್ಮಡಿ ರಾಜನು ಆಳಿದನೆಂದು ಶಾಸನ ತಿಳಿಸುತ್ತದೆ ಆದರೆ ಇವರಿಬ್ಬರ ಸಂಬಂಧವೇನೆಂಬುದನ್ನು ಶಾಸನ ಸ್ಪಷ್ಟಪಡಿಸುವುದಿಲ್ಲ ಇಮ್ಮಡಿ ರಾಜನ ಅನಂತರ ಪಟ್ಟಕ್ಕೆ ಬಂದವನು ಕಂಠೀರವ ನರಸ ಇವರಿಬ್ಬರ ನಡುವಣ ಸಂಬಂಧವನ್ನಾಗಲೀ ಅನಂತರ ಪಟ್ಟಕ್ಕೆ ಬಂದ ದೇವರಾಜ ಮತ್ತಿತರರ ಸಂಬಂಧವನ್ನಾಗಲೀ ಶಾಸನದಲ್ಲಿ ಸೂಚಿಸಿಲ್ಲ ದೇವರಾಜನ ವಂಶದಲ್ಲಿ ಚಿಕ್ಕದೇವರಾಜ ರಾಜ್ಯವಾಳಿದ ಈತನ ಮಗ ಕಂಠೀರವ ನರಸರಾಜ ಈತನಿಗೆ ಚಿಕ್ಕರಾಜನೆಂಬ ಹೆಸರೂ ಇದ್ದಂತೆ ತೋರುತ್ತದೆ ಕೃಷ್ಣರಾಜನಿಗೆ ದೇವೀರಮ್ಮಾಂಬೆಯಲ್ಲಿ ಇಮ್ಮಡಿ ಕೃಷ್ಣರಾಜ ಜನಿಸಿದ ಚಾ ನ ೧೧ರ ಪ್ರಕಾರ ದೊಡ್ಡ ದೇವರಾಜ ಹಾಗೂ ದೇವರಾಜನೆಂದೇ ಹೆಸರುಳ್ಳ ಆತನ ಮೂವರು ಸೋದರರು ರಾಜೇಂದ್ರನ ತಮ್ಮ ದೇವರಾಜೇಂದ್ರನ ಮಕ್ಕಳು ಪ್ರಸ್ತುತ ಶಾಸನವ ರಾಜನೇ ಇಲ್ಲಿ ಉಕ್ತನಾಗಿರುವ ರಾಜೇಂದ್ರ ಚಿಕ್ಕದೇವರಾಜ ಆತನ ಹಿರಿಯಮಗನೆಂದೂ ಕಂಠೀರವ ನರಸನು ಕಿರಿಯಮಗನೆಂದೂ ಹೇಳಿದೆ ಚಾ ನ ೧೧ರಲ್ಲಿ ದಾನಿಯಾಗಿ ಉಲ್ಲೇಖಗೊಂಡಿರುವ ಚಿಕ್ಕದೇವರಾಜನ ಹೆಸರಿನೊಂದಿಗೆ ವಂಶಾವಳಿ ನಿಂತುಬಿಟ್ಟಿದೆ ವಂಶಾವಳಿಯಲ್ಲಿ ಕಂಡುಬರುವ ವ್ಯತ್ಯಾಸವನ್ನು ನಾವಿಲ್ಲಿ ಗಮನಿಸಿದ್ದೇವೆ ಮುಂದಿನ ಸಂಪುಟಗಳಲ್ಲಿ ಪ್ರಕಟವಾಗಲಿರುವ, ಈ ವರೆಗೆ ತಿಳಿದು ಬಂದಿರುವ ಇತರ ಶಾಸನಗಳ ಬೆಳಕಿನಲ್ಲಿ ಈ ಸಮಸ್ಯೆಯನ್ನು ವಿಶ್ಲೇಷಿಸಬಹುದಾಗಿದೆ

ಹರದನಹಳ್ಳಿ ಶಾಸನವು ಇಲ್ಲಿಂದ ಮುಂದೆ ಕಳಲೆ ವಂಶಸ್ಥರಾದ ನಂಜರಾಜ ಮತ್ತು ದೇವರಾಜ ಎಂಬ ಕೃಷ್ಣರಾಜನ ಮಂತ್ರಿಗಳ ವೃತ್ತಾಂತವನ್ನು ನೀಡುತ್ತದೆ ಇವರು ಅಣ್ಣತಮ್ಮಂದಿರಲ್ಲ, ಅಣ್ಣತಮ್ಮಂದಿರ ಮಕ್ಕಳು ಮೊದಲನೆಯವನು ಸರ್ವಾಧಿಕಾರಿಯಾದರೆ, ಎರಡನೆಯವನು ಸೇನೆಯ ನೇತೃತ್ವವನ್ನು ವಹಿಸಿಕೊಂಡು ಮಿಡಿಗೇಶಿ, ಮಾಗಡಿ ಹಾಗೂ ಸಾವಂದಿಯ ಪ್ರಭುಗಳನ್ನು ಸೋಲಿಸಿದ ವೆಂಕಟಪತಿಯ ಅಮಾತ್ಯ ಪದವಿಯನ್ನು ವಹಿಸಿಕೊಂಡನೆಂದು ಪ್ರಸ್ತುತ ಶಾಸನ ತಿಳಿಸುತ್ತದೆ ಅವನ ವಂಶಾವಳಿಯನ್ನೂ ಕೊಟ್ಟಿದೆ ನಂಜರಾಜ ಸರ್ವಾಧಿಕಾರಿಯಾಗಿ ಅಧಿಕಾರದಲ್ಲಿ ಇನ್ನೂ ಕೆಲವು ವರ್ಷಗಳಕಾಲ ಮುಂದುವರಿದ [1]

ಕ್ರಿ ಶ ೧೭೬೨ ಹಾಗೂ ೧೭೬೩ರ ತೇದಿ ಇರುವ ಈ ಅರಸನ ಎರಡು ಶಾಸನಗಳು (ಕ್ರಮವಾಗಿ ಚಾ ನ ೧೯೭ ಮತ್ತು ಯಳಂ ೧೪೫) ಅರಸನು ಕಾಶಿಯ ವಾಸಿ ಜಯಂತಿರಾಮಭಟ್ಟ ಹಾಗೂ ಮುತಾಲಿಕ ವೆಂಕಟರಾಮಯ್ಯನವರಿಗೆ ಭೂಮಿಯನ್ನು ಕ್ರಯವಾಗಿ ನೀಡಿದ ಸಂಗತಿಯನ್ನು ನಿರೂಪಿಸುತ್ತದೆ, ಭೂಮಿಯ

---

[1] C Hayavadanarao Mysore Gazetteer, Vol II, pt IV, p 2466

ಬೆಲೆಯನ್ನು ಅವರು ಕೊಳ್ಳಗಾಲದ ವ್ಯಾಪಾರಿ ವೀರನೆಟ್ಟಿಯ ಮುಖಾಂತರ ಬೊಕ್ಕಸಕ್ಕೆ ಒಪ್ಪಿಸಿದುದನ್ನೂ ಶಾಸನದಲ್ಲಿ ಹೇಳಿದೆ ನಂಜನಗೂಡು ತಾಲ್ಲೂಕಿನ ಕ್ರಿ ಶ ೧೭೭೧ರ ನಾಲ್ಕು ಶಾಸನಗಳಲ್ಲಿ ಇದೇ ಅರಸನಿಂದ ಭೂಮಿಯನ್ನು ಕೊಂಡ ವೆಂಕಟರಾಮಯ್ಯನು ಇಲ್ಲಿ ಉಕ್ತನಾಗಿರುವ ವೆಂಕಟರಾಮಯ್ಯನೇ ಇರಬೇಕು[1] ಇವುಗಳಲ್ಲಿ ಮೂರು ಶಾಸನಗಳಲ್ಲಿ ವೀರನೆಟ್ಟಿಯೂ ಕಾಣಿಸಿಕೊಂಡಿದ್ದಾನೆ[2]

ಚಾಮರಾಜವೊಡೆಯರ್ಯ್ಯನ ಉಲ್ಲೇಖ ಯಳಂದೂರು ತಾಮ್ರಶಾಸನದಲ್ಲಿ (ಯಳಂ ೧೦) ಕಂಡುಬರುತ್ತದೆ ಇದರ ಕಾಲ ಕ್ರಿ ಶ ೧೭೭೫, ಆಗಸ್ಟ್ ೮ ಅದೇ ವರ್ಷದಲ್ಲಿ ಮೃತನಾದ ಎಂಟನೇ ಚಾಮರಾಜನೇ ಈ ಅರಸನೆಂದು ಗುರುತಿಸಬಹುದಾಗಿದೆ ಹಾಗಿದ್ದಲ್ಲಿ, ಈ ಶಾಸನದ ಕಾಲಾನಂತರವೇ ಆತನ ಮರಣ ಸಂಭವಿಸಿರಬೇಕು ಅನಂತರ ಕಾರುಗಹಳ್ಳಿ ಶಾಖೆಯ ಒಂಬತ್ತನೇ ಚಾಮರಾಜನನ್ನು ಮುಂದಿನ ಅರಸನನ್ನಾಗಿ ಹೈದರ್‌ಆಲಿಯು ಆರಿಸಿದ

ಕ್ರಿ ಶ ೧೭೯೯ರಿಂದ ೧೮೬೮ರವರೆಗೆ ಎಪ್ಪತ್ತು ವರ್ಷಗಳಷ್ಟು ದೀರ್ಘಕಾಲ ರಾಜ್ಯವಾಳಿದ ಮುಮ್ಮಡಿ ಕೃಷ್ಣರಾಜ ವೊಡೆಯರ ಸುಮಾರು ಹನ್ನೆರಡು ಶಾಸನಗಳು ದೊರೆತಿವೆ ಇವು ಆತನ ದಾನಶೀಲತೆಯನ್ನು ಕುರಿತು ಹೇಳುತ್ತವೆ

ಈತನ ತಂದೆ ಚಾಮರಾಜನ ಜನ್ಮಸ್ಥಳವಾದ ಅರಿಕೊಠಾರಕ್ಕೆ ಆತನ ಹೆಸರಿನಲ್ಲಿ ಚಾಮರಾಜನಗರವೆಂದು ಹೆಸರಿಟ್ಟು, ಅಲ್ಲಿ ಚಾಮರಾಜೇಶ್ವರ ದೇವಾಲಯವನ್ನು ಕಟ್ಟಿಸಲಾಯಿತು (ಚಾ ನ ೫) ಅಂಚವಾಡಿಯ ವೀರಭದ್ರ ದೇವಾಲಯವನ್ನು ಜೀರ್ಣೋದ್ಧಾರಗೊಳಿಸಲಾಯಿತು (ಚಾ ನ ೨೮೮)

## ಚಂಗಾಳ್ವರು

ಹೊಯ್ಸಳರ ಶಾಸನಗಳನ್ನು ಪರಿಶೀಲಿಸುವಾಗ ಹು ೩೩ ಮತ್ತು ಪಿ ಪ ೧೧೮—ಈ ಎರಡು ಶಾಸನಗಳನ್ನು ಉಲ್ಲೇಖಿಸಿದ್ದೇವೆ ಮೊದಲನೆಯದು ಒಂದನೇ ನರಸಿಂಹನ ಆಳ್ವಿಕೆಯ ಕಾಲಕ್ಕೆ ಸೇರಿದುದಾಗಿದ್ದು, ಬನ್ನಿಗವಾಡಿಯ ಮೇಲೆ ಚಂಗಾಳುವನ ಗೋಗ್ರಹಣಕಾರ್ಯವನ್ನೂ ಅವನನ್ನು ಹಿಮ್ಮೆಟ್ಟಿಸಿದುದನ್ನೂ ಉಲ್ಲೇಖಿಸುತ್ತದೆ ಅರಸನ ಹೆಸರನ್ನೇ ಉಲ್ಲೇಖಿಸಿಲ್ಲದಿರುವುದರಿಂದ ಈ ಚಂಗಾಳ್ವರಸನನ್ನು ಗುರುತಿಸಲು ಸಾಧ್ಯವಿಲ್ಲವಾಗಿದೆ

ಆದರೆ ಈ ಕಾಲಕ್ಕೂ ಮೊದಲೇ ಇದ್ದ ಈ ವಂಶದರಸರನ್ನು ಉಲ್ಲೇಖಿಸುವ ಕೊನೆಯ ಪಕ್ಷ ಮೂರು ಶಾಸನಗಳಾದರೂ ಪ್ರಸ್ತುತ ಸಂಪುಟದಲ್ಲಿವೆ ಕ್ರಿ ಶ ೧೦೯೧ರ ಕಿರಂಗೂರಿನ ಶಾಸನವು (ಹು ೩೫) ಚಂಗಾಳ್ವದೇವ ಮತ್ತು ಮರಿಯಮೆಗ್ಗಡೆ ಹಿಟ್ಟುವಯ್ಯರು ಭೂದಾನವೊಂದನ್ನು ನೀಡಿದುದನ್ನು ನಿರೂಪಿಸುತ್ತದೆ ಈ ಚಂಗಾಳ್ವದೇವ ಸ್ವತಂತ್ರನಾಗಿ ಆಳುತ್ತಿದ್ದನೆ ಅಥವಾ ಚೋಳಸಾಮಂತನಾಗಿ ಆಳುತ್ತಿದ್ದನೆ ಎಂಬುದನ್ನು ಶಾಸನದಲ್ಲಿ ಸೂಚಿಸಿಲ್ಲ ಆತನಿಗೆ ಯಾವ ಬಿರುದುಗಳನ್ನೂ ಉಲ್ಲೇಖಿಸಿಲ್ಲ ನಿಜವಾಗಿ ಆತ ಚಂಗಾಳ್ವವಂಶಕ್ಕೆ ಸೇರಿದ್ದನೆ ಎಂದು ಸಂದೇಹಿಸಲೂ ಸಾಧ್ಯವಿದೆ ಆದರೆ ಸುಮಾರು ಕ್ರಿ ಶ ೧೦೯೭ರ ಪಿ ಪ ೧೩೦ನೆಯ ಶಾಸನವು ಮಹಾಮಂಡಲೇಶ್ವರ ಕುಲೋತ್ತುಂಗಚೋಳ ಒಡೆಯಾತ್ಯದೇವನ ಆಳ್ವಿಕೆಯನ್ನು ಉಲ್ಲೇಖಿಸುತ್ತದೆ ಒಡೆಯಾತ್ಯ ಎಂಬುದು ಒಡೆಯಾದಿತ್ಯ ಎಂದಾಗಿರಬಹುದು ಆತ ಚೋಳರಸ ಒಂದನೇ ಕುಲೋತ್ತುಂಗನ ಸಾಮಂತನಾಗಿದ್ದನೆಂಬುದು ಆತನ ಬಿರುದಿನಿಂದ ಸ್ಪಷ್ಟಪಡುತ್ತದೆ ಕುಲೋತ್ತುಂಗ ಚೋಳ ಎಂಬುದು ಮುಂದೆ ಚಂಗಾಳ್ವರ ಬಿರುದಾಯಿತು ಕ್ರಿ ಶ ೧೧೭೨ರ ಪಿ ಪ ೨ರಲ್ಲಿ ಇನ್ನೊಬ್ಬ ಮಹಾಮಂಡಲೇಶ್ವರ ಕುಲೋತ್ತುಂಗಚೋಳಚಂಗಾಳ್ವನ ಉಲ್ಲೇಖವಿದೆ ಅನಂತರದ ಎರಡು ವರ್ಷಗಳಲ್ಲಿ ಹುಟ್ಟಿದ ಎಂದರೆ ೧೧೭೪ರ ಪಿ ಪ ೧೮ರಲ್ಲಿ ಮಹಾದೇವ ಮತ್ತು ಪೆಮ್ಮವೀರರಸ ಎಂಬ ಈ ಮನೆತನದ ಇನ್ನಿಬ್ಬರು ಅರಸರು ಉಲ್ಲೇಖಿತರಾಗಿದ್ದಾರೆ ಹಿಂದೆಯೇ ಗಮನಿಸಿದಂತೆ ಹೊಯ್ಸಳ ಸೇನಾನಿ ಬೆಟ್ಟರಸದಣ್ಣಾಯಕನು ಚಂಗಾಳ್ವ ಮಹಾದೇವನ ಮೇಲೆ ಬಿದ್ದು ಅವನನ್ನು ಕೊಂದರೂ(?) ಮಹಾಮಂಡಲೇಶ್ವರ ಪೆಮ್ಮವೀರರಸನಿಂದ ಹಿಮ್ಮೆಟ್ಟಬೇಕಾಯಿತೆಂದು ಈ ಶಾಸನದಿಂದ ನಮಗೆ ತಿಳಿದು ಬರುತ್ತದೆ ಇದೇ ವರ್ಷಕ್ಕೆ ಸೇರಿದ (ಕ್ರಿ ಶ ೧೧೭೪) ಎರಡು ಶಾಸನಗಳು (ಪಿ ಪ ೧೪ ಮತ್ತು ೧೫) ಕುಲೋತ್ತುಂಗ ಚೋಳಭುಜಬಲಚಂಗಾಳ್ವನ ಆಳ್ವಿಕೆಯನ್ನು ಉಲ್ಲೇಖಿಸುತ್ತವೆ ಈ ಕುಲೋತ್ತುಂಗಚೋಳಚಂಗಾಳ್ವನು ಕ್ರಿ ಶ ೧೧೭೨ರಲ್ಲಿ ಕಂಡುಬರುವ ಅರಸನಿಂದ ಅನನ್ಯನೇ ಎಂಬುದನ್ನು ಖಚಿತವಾಗಿ ಹೇಳುವುದು ಸಾಧ್ಯವಿಲ್ಲವಾಗಿದೆ ಹಾಗಿದ್ದರೆ

---

[1] ಎ ಕ III (1974) ನಂ ಗು109, 316, 317 ಮತ್ತು 319

[2] ಅದೇ ನಂ ಗು 109, 317, 319

ಮಹಾದೇವ ಮತ್ತು ಪೆಮ್ಮವೀರರಸರೇನಾಗಿದ್ದರು? ಮಹಾದೇವನ ಮರಣ ಮತ್ತು ಪೆಮ್ಮವೀರರಸನಿಂದುಂಟಾದ ಹೊಯ್ಸಳಸೇನಾನಿಯ ಪರಾಜಯ—ಇವುಗಳ ನಡುವೆ ಕೆಲವು ವರ್ಷಗಳ ಅಂತರವನ್ನು ನಾವು ಒಪ್ಪಿಕೊಳ್ಳುವುದಾದರೆ, ಕುಲೋತ್ತುಂಗಚೋಳ ಎಂಬುದು ಕೇವಲ ಒಂದು ಬಿರುದಾಗಿದ್ದು, ಕ್ರಿ ಶ ೧೧೭೩ ಮತ್ತು ಕ್ರಿ ಶ ೧೧೭೪ರ ಕುಲೋತ್ತುಂಗ ಚೋಳಚಂಗಾಳ್ವನು ಪೆಮ್ಮವೀರರಸನೆಂದು ಗುರುತಿಸಬಹುದಾಗಿದೆ ಕ್ರಿ ಶ ೧೧೮೬–೮೭ರ ಹು ೩೬ನೆಯ ಶಾಸನವು ಕುಲೋತ್ತುಂಗಚೋಳಚಂಗಾಳ್ವನ ಆಳ್ವಿಕೆಯನ್ನು ಉಲ್ಲೇಖಿಸುತ್ತದೆ

ಇಲ್ಲಿಂದ ಮುಂದೆ ಸುಮಾರು ಎರಡು ಶತಮಾನಗಳ ಕಾಲ ಚಂಗಾಳ್ವರ ಇತಿಹಾಸ ಸಮಗ್ರ ತಿಳಿದುಬರುವುದಿಲ್ಲ ಈ ಕಾಲದಲ್ಲಿ ಅವರು ಹೊಯ್ಸಳರ ಅಧೀನರಾಗಿದ್ದರು ೧೩ನೆಯ ಶತಮಾನದ ಕೊನೆಯ ದಶಕಗಳಲ್ಲಿ ಮಲ್ಲಿದೇವ ಮತ್ತು ಹರಿಹರದೇವ ಎಂಬಿಬ್ಬರು ಕಂಡುಬರುತ್ತಾರೆ[1] ಆದರೆ ಚಂಗಾಳ್ವ ವಂಶಾವಳಿಯಲ್ಲಿ ಅವರ ಸ್ಥಾನ ತಿಳಿದುಬರುವುದಿಲ್ಲ

ಅನಂತರ ಅಧಿಕಾರಕ್ಕೆ ಬಂದ ಚಂಗಾಳ್ವರ ವಂಶಾವಳಿಯನ್ನು ಹಿರೇ ಮಳಲಿ ಶಾಸನವು ಒದಗಿಸುತ್ತದೆ ಕ್ರಿ ಶ ೧೫೦೩–೦೪ರ ಈ ಶಾಸನ (ಪಿ ಪ ೧೩೨) ಸಂಸ್ಕೃತದಲ್ಲಿ ರಚಿತವಾಗಿದ್ದು ಆ ವಂಶದ ಮಹಾದೇವನು ದಾನವೊಂದನ್ನು ನೀಡಿದ ವಿಚಾರವನ್ನು ನಿರೂಪಿಸುತ್ತದೆ ಇಲ್ಲಿ ಕೊಟ್ಟಿರುವ ವಂಶಾವಳಿಯು ಈ ಕೆಳಕಂಡಂತಿದೆ




ಕ್ರಿ ಶ ೧೫೦೨ರಿಂದ ೧೫೩೩ರ ವರೆಗೆ ರಾಜ್ಯವಾಳಿದನೆಂದು ಹೇಳಲಾದ[2] ತನ್ನ ಸೋದರ ನಂಜನೊಂದಿಗೆ ಈ ಮಹಾದೇವನು ಸೌಹಾರ್ದದ ಸಂಬಂಧವನ್ನು ಹೊಂದಿದ್ದನೆಂದು ತೋರುತ್ತದೆ ಕ್ರಿ ಶ ೧೫೨೧ರ ತೇದಿ ಇರುವ ಪಿ ಪ ೨೨ರಲ್ಲಿ ಕಂಡುಬರುವ ಕುಲೋತ್ತುಂಗಚಂಗಾಳ್ವ ವೀರನಂಜಯದೇವನು ಮಹಾದೇವನ ಅಣ್ಣನಾದ ನಂಜನೇ ಎಂದು ಹೇಳಬಹುದು

ನಂಜ ಅಥವಾ ನಂಜರಾಯನ ನಂತರ ಅವನ ಮಗ ನಂಜುಂಡನು ಅಧಿಕಾರಕ್ಕೆ ಬಂದಂತೆ ತೋರುತ್ತದೆ ಈತನ ಮಗ ಶ್ರೀಕಂಠ (ಪಿ ಪ ೧೧೪) ಈತನೇ ಕ್ರಿ ಶ ೧೫೪೪ರ ಚೇರಲಸಿರಿಮಂಗಲ ಶಾಸನೋಕ್ತ[3] ಶ್ರೀಕಂಠರಸ ನಂಜುಂಡನ ಆಳ್ವಿಕೆಯ ಕಾಲ ಕ್ರಿ ಶ ೧೫೨೧ ಮತ್ತು ೧೫೪೪ರ ನಡುವೆ ಎಂದು ನಾವು ತಿಳಿಯಬೇಕಾಗುತ್ತದೆ ಶ್ರೀಕಂಠನ ಮಗ ವೀರ ವೀರೇದೇವ ಆದರೆ ಪಿ ಪ ೧೦೩ನೆಯ ಶಾಸನವು ವೀರ ಚಿಕ್ಕರಾಜುವೊಡೆಯನನ್ನು ಉಲ್ಲೇಖಿಸುತ್ತದೆ ಈ ಶಾಸನದ ಕಾಲವು (ಕ್ರಿ ಶ ೧೫೬೫) ವೀರ ವೀರೇದೇವನ ಶಾಸನದ ಕಾಲಕ್ಕಿಂತ (ಕ್ರಿ ಶ ೧೫೬೮) ಮೂರು ವರ್ಷ ಮಾತ್ರ ಹಿಂದಿನದು ಚಿಕ್ಕರಾಜುವೇ ಪ್ರಾಯಶಃ ಈ ವೀರ ವೀರೇದೇವನೆಂದು ನಾವು ಗುರುತಿಸಬಹುದಾಗಿದೆ ಕ್ರಿ ಶ ೧೫೮೬ ಹಾಗೂ ಅನಂತರದ ಕಾಲಕ್ಕೆ ಸೇರಿದ, ಈ ಸಂಪುಟದಲ್ಲಿ ಪ್ರಕಟವಾಗಿರುವ, ಶಾಸನಗಳು (ಕ್ರಿ ಶ ೧೫೮೬ರ ಪಿ ಪ ೭೧ ಮತ್ತು ೧೧೦, ೧೫೯೦ರ ಪಿ ಪ ೧ ಮತ್ತು ೬೩, ೧೫೯೧ರ ಪಿ ಪ ೩೭ ಮತ್ತು ೪೦) ಪಿರಿಯರಾಜ ಒಡೆಯನನ್ನು ಶ್ರೀಕಂಠ ಒಡೆಯನ ಮಗನೆಂಬುದಾಗಿ ಉಲ್ಲೇಖಿಸುತ್ತವೆ ಪಿ ಪ ೭೧ನೆಯ ಶಾಸನವಿರುವ ಕಲ್ಲಿನ ಮೇಲ್ಭಾಗದಲ್ಲಿ ಪಿ ಪ ೭೩ನ್ನು ಕಂಡರಿಸಲಾಗಿದೆ ಈತ ತನ್ನ ತಂದೆ ತಾಯಿ ಹಾಗೂ ಮಗ ಪಿರಿಯೊಡೆಯ ಇವರೆಲ್ಲರಿಗೂ ಪುಣ್ಯವಾಗಬೇಕೆಂದು ಶ್ರೀಗಿರಿಯ (ಈಗಿನ ಬೆಟ್ಟದಪುರ) ಅನ್ನದಾನಿ ಮಲ್ಲಿಕಾರ್ಜುನದೇವರಿಗೆ ಗ್ರಾಮವೊಂದನ್ನು ದತ್ತಿ ಬಿಟ್ಟುದನ್ನು ಪಿ ಪ ೭೧ನೆಯ ಶಾಸನ ತಿಳಿಸುತ್ತದೆ ವೀರರಾಜ ಒಡೆಯನ ಪುಣ್ಯಾರ್ಥವಾಗಿ ನೀಡಿದ ಇನ್ನೊಂದು ದಾನವನ್ನು ಪಿ ಪ ೭೩ ಉಲ್ಲೇಖಿಸುತ್ತದೆ

---

1 ಎ ಕ 1 (1972) ಪೀಠಿಕೆ ಪು xxxiv
2 ಎ ಕ II (1973) ಪೀಠಿಕೆ ಪು lxii
3 ಎ ಕ I (1972) ಶಾಸನ ಸಂಖ್ಯೆ 35

ಇವುಗಳಿಂದ ಶ್ರೀಕಂಠರಸನಿಗೆ ವೀರರಾಜ ಹಾಗೂ ಪಿರಿಯರಾಜರೆಂಬ ಇಬ್ಬರು ಮಕ್ಕಳಿದ್ದರೆಂದು ನಾವು ಊಹಿಸಬಹುದಾಗಿದೆ ಹಿರಿಯವನು ಕೆಲವು ವರ್ಷಗಳ ಅಧಿಕಾರದಲ್ಲಿದ್ದು ಅನಂತರ ಅವನ ತಮ್ಮ ಪಟ್ಟಕ್ಕೆ ಬಂದಂತೆ ತೋರುತ್ತದ ಪಿರಿಯರಾಜನಿಗೆ ಪಿರಿಯೊಡೆಯನೆಂಬ ಮಗನಿದ್ದು, ಅವನು ತನ್ನ ತಂದೆಗಿಂತ ಮೊದಲೇ ಮರಣಹೊಂದಿದನೆಂದು ಮತ್ತು ಅವನ ಪುಣ್ಯಾರ್ಥವಾಗಿ ಕ್ರಿ ಶ ೧೫೮೬ ಹಾಗೂ ಅನಂತರದ ಕಾಲದಲ್ಲಿ ಅನೇಕ ದಾನಧರ್ಮಗಳನ್ನು ಮಾಡಲಾಯಿತೆಂದು ತಿಳಿದುಬರುತ್ತದೆ (ಪಿ ಪ ೩೭, ೬೩, ೭೧ ಹಾಗೂ ೧೧೦) ಕ್ರಿ ಶ ೧೫೯೧ರ ಪಿ ಪ ೪೦ನೆಯ ಶಾಸನದಲ್ಲಿ ಪಿರಿಯರಾಜ ತನ್ನ ಅರಸಿಗೆ (ಪಟ್ಟದ ರಾಣೀವಾಸ) ಕೈಲಾಸಪ್ರಾಪ್ತಿಯಾಗಬೇಕೆಂದು ದಾನವೊಂದನ್ನು ನೀಡಿದುದನ್ನು ನಿರೂಪಿಸಿರುವುದರಿಂದ, ಆತನ ಪತ್ನಿಯ ಮರಣಸಂಗತಿಯನ್ನು ಈ ಶಾಸನ ಉಲ್ಲೇಖಿಸಿದೆ ಎಂದು ಹೇಳಬಹುದಾಗಿದೆ ಇಂದಿನ ಪಿರಿಯಾಪಟ್ಟಣ ಮೂಲತಃ ಸಿಂಗಪಟ್ಟಣವೆಂಬ ಹೆಸರಿನಿಂದ ಪರಿಚಿತವಾಗಿತ್ತು ಈ ಪುರವನ್ನು ಪಿರಿಯರಾಜದೇವನು ಪುನರ್‌ನಿರ್ಮಿಸಿ ತನ್ನ ಹೆಸರಿನಿಂದ ಪಿರಿಯರಾಜಪಟ್ಟಣವೆಂದು ಕರೆಯುವಂತೆ ವಿಧಿಸಿದನು (ಪಿ ಪ ೧)

ಕ್ರಿ ಶ ೧೫೯೮ರ ಸುರಗಹಳ್ಳಿ ಶಾಸನದಲ್ಲಿ (ಪಿ ಪ ೩೫) ದಾನಿಯಾದ ರುದ್ರಗಣನನ್ನು ಶ್ರೀಕಂಠರಾಜ ಒಡೆಯನ ಮಗನೆಂಬುದಾಗಿ ಉಲ್ಲೇಖಿಸಿದೆ ಕ್ರಿ ಶ ೧೬೦೦ರ ಪಿ ಪ ೧೦ರಲ್ಲಿ ಈತನನ್ನು ಮಲ್ಲಿಕಾರ್ಜುನದೇವರ ಭಕ್ತ(ಪಂದಾರ)ನಾದ ಚೆಂನೆಯನ ಮಗನೆಂದು ಹೇಳಿದೆ ಆದರೆ ಇದೇ ಶಾಸನವು ಆತ ತನ್ನ ತಂದೆ ಶ್ರೀಕಂಠ ಮತ್ತು ತಾಯಿ ಪಲ್ಲಭಾಜಮ್ಮನವರಿಗೆ ಪುಣ್ಯವಾಗಬೇಕೆಂದು ದಾನನೀಡಿದುದನ್ನು ಉಲ್ಲೇಖಿಸುವುದರಿಂದ ಶ್ರೀಕಂಠನಿಗೆ ಚೆಂನೆಯನೆಂಬ ಹೆಸರೂ ಇದ್ದಿರಬಹುದಾದ ಸಾಧ್ಯತೆ ಇದೆ ಆದ್ದರಿಂದ ರುದ್ರಗಣ ಶ್ರೀಕಂಠನ ಮೂರನೆಯ ಮಗನಾಗುವನು

ಪಿ ಪ ೮ ಶ್ರೀಕಂಠನ ಮೊಮ್ಮಗ ಮತ್ತು ವೀರರಾಜಯ್ಯನ ಮಗ ವೀರಪರಾಜಯ್ಯ ನೀಡಿದ ದತ್ತಿಯೊಂದನ್ನು ಕುರಿತದ್ದಾಗಿದೆ ಈ ಶಾಸನದ ಕಾಲ ಕ್ರಿ ಶ ೧೬೧೩ ಪಿ ಪ ೯ನೆಯ ಶಾಸನವೂ ಅದೇ ವಂಶಾವಳಿಯನ್ನು ಕೊಟ್ಟರೂ ನಂಜುಂಡನೆಂದು ನಾವು ಗುರುತಿಸಿರುವ ನಂಜರಾಜನಿಂದ ಆರಂಭಗೊಳ್ಳುತ್ತದೆ ವೀರಪ್ಪನನ್ನು ಅಲ್ಲಿ ವೀರರಾಜಯನೆಂದು ಉಲ್ಲೇಖಿಸಿದೆ ಆದ್ದರಿಂದ ವೀರರಾಜಯನು ಶ್ರೀಕಂಠನ ಹಿರಿಯ ಮಗನ ಮಗನೆಂಬುದೂ ಆತ ತನ್ನ ಚಿಕ್ಕಪ್ಪ ರುದ್ರಗಣನ ನಂತರ ಪಟ್ಟಕ್ಕೆ ಬಂದವನೆಂಬುದೂ ಸ್ಪಷ್ಟಪಡುತ್ತದೆ ಆದರೆ ಕ್ರಿ ಶ ೧೬೧೩ಕ್ಕೆ ಸೇರುವ ನೆಲವಾಡಿ ಶಾಸನವು (ಪಿ ಪ ೯೦) ಈ ವಂಶದ ವೀರರಾಜಯ್ಯನನ್ನು ಉಲ್ಲೇಖಿಸುತ್ತದೆ ವಂಶಾವಳಿಯಿರುವ ಭಾಗ ಸ್ವಲ್ಪ ತ್ರುಟಿತವಾಗಿದೆ ಆದರೆ ವಂಶಾವಳಿ ನಂಜರಾಜಯ್ಯನಿಂದ ಆರಂಭಗೊಂಡು, ಅವನ ಮಗ ನಂಜರಾಜಯ್ಯ (ಬಹುಶಃ ನಂಜುಂಡ), ಅವನ ಮಗ ಶ್ರೀ ರಾಜಯ್ಯ (ಬಹುಶಃ ಶ್ರೀಕಂಠ), ಅವನ ಮಗನೆಂದು ಹೇಳಲಾದ ಕೃಷ್ಣರಾಜಯ್ಯ ಎಂಬುವರನ್ನು ಹೆಸರಿಸುತ್ತದೆ ಕೃಷ್ಣರಾಜಯ್ಯ ಹಾಗೂ ಶಾಸನೋಕ್ತ ದಾನಿಯ ಸಂಬಂಧ ಸ್ಪಷ್ಟವಾಗಿಲ್ಲ, ಆದರೆ ಅವರು ಕ್ರಮವಾಗಿ ತಂದೆ ಮಕ್ಕಳಿರಬಹುದು ಈ ಕೃಷ್ಣರಾಜನನ್ನು ಗುರುತಿಸುವುದೊಂದು ಸಮಸ್ಯೆಯಾಗಿದೆ ಈತ ಮೇಲೆ ಹೇಳಿದ ಶ್ರೀಕಂಠನ ಮಗನೇ ಆಗಿದ್ದಲ್ಲಿ ಅವನ ಮೂವರು ಮಕ್ಕಳಿಂದ ಭಿನ್ನನೇ ? ಈ ಬಗ್ಗೆ ಖಚಿತವಾಗಿ ಹೇಳುವುದು ಸಾಧ್ಯವಿಲ್ಲವಾಗಿದೆ

ಮೇಲಿನ ವಿಶ್ಲೇಷಣೆಯ ಬೆಳಕಿನಲ್ಲಿ ಈಚಿನ ಚಂಗಾಳ್ವರಸರ ವಂಶಾವಳಿಯನ್ನು ಹೀಗೆ ತೋರಿಸಬಹುದು



## ಕವಿಗಳು ಮತ್ತು ರೂವಾರಿಗಳು

ಪ್ರಸ್ತುತ ಸಂಪುಟದಲ್ಲಿ ಛಂದಸ್ಸಿಗನುಗುಣವಾಗಿ ಶಾಸನಗಳನ್ನು ಬರೆದಿರುವ ಸುಮಾರು ಆರು ಜನ ಕವಿಗಳು ಬೆಳಕಿಗೆ ಬಂದಿದ್ದಾರೆ ಅವರಲ್ಲಿ ಮೊದಲಿಗನು ಹೊಮ್ಮಾರೆ ಶಾಸನ (ಚಾ ನ ೧೪೮)ವನ್ನು ರಚಿಸಿರುವ ಆಕ್ಷಾರದ ಗೋಪಣ್ಣ ಶಾಸನದಲ್ಲಿ ಗೋಪಣ್ಣನ ಬರಹ ಎಂದು ಮಾತ್ರ ಹೇಳಿದೆ ಆದರ ಶಾಸನವು ವೃತ್ತದಲ್ಲಿರುವುದರಿಂದ ಅವನನ್ನು ಆ ಶಾಸನ ಕರ್ತೃವೆಂದು ಪರಿಗಣಿಸಬಹುದು ಕ್ರಿ ಶ ೧೫೧೧ರ ಚಾ ನ ೩೫೮ನೆಯ ಮಲೆಯೂರಿನ ಚಿಕ್ಕ ಶಾಸನವು ಸಂಸ್ಕೃತ ವೃತ್ತದಲ್ಲಿದೆ ಆ ಶಾಸನ ಪದ್ಯವು ವಿದ್ಯಾನಂದೋಪಾಧ್ಯಾಯ ಕೃತವೆಂದೂ ವೃಷಭದಾಸವರ್ಣಿಯಿಂದ ಲಿಖಿತವಾಯಿತೆಂದೂ ಹೇಳಿದೆ ವೃಷಭದಾಸವರ್ಣಿಯು ಕಲ್ಲಿನ ಮೇಲೆ ಬರದವನಾಗಿರಬೇಕು ಇಲ್ಲಿ ಲಿಖಿತಂ ಎಂಬ ಪದವು ಶಾಸನವನ್ನು ರಚಿಸಿದವನಿಗೆ ಅನ್ವಯಿಸದೆ ಕಲ್ಲಿನ ಮೇಲೆ ಬರೆದವನಿಗೆ ಅನ್ವಯಿಸುತ್ತದೆಂಬುದನ್ನು ಸ್ಪಷ್ಟವಾಗಿ ಕಾಣಬಹುದು ಕನ್ನಡ ಕವಿಯೂ 'ಕಾವ್ಯಸಾರ'ದ ಕರ್ತೃವೂ ಆದ ಅಭಿನವವಾದಿ ವಿದ್ಯಾನಂದನೂ ಇದೇ ಕಾಲಕ್ಕೆ ಸೇರಿದವನೆಂಬುದನ್ನು ಗಮನಿಸಬಹುದು (ಕ್ರಿ ಶ ೧೫೩೩)[1] ಪ್ರಸ್ತುತ ಶಾಸನದ ಕರ್ತೃವಾದ ವಿದ್ಯಾನಂದೋಪಾಧ್ಯಾಯನೇ ಈ ಅಭಿನವವಾದಿ ವಿದ್ಯಾನಂದನೆಂದು ನಿಶ್ಚಿತವಾಗಿ ಹೇಳಲು ಸಾಧ್ಯವಿಲ್ಲ

೧೫೭೮–೭೯ರ ಯಳಂದೂರಿನ (ಯಳಂ ೧) ಶಾಸನವು ಸರಸಕವಿ ಎಂದು ವರ್ಣಿತನಾಗಿರುವ ಸಾಸಲಯ್ಯನ ರಚನೆ ಇಲ್ಲಿಯೂ ಇದು ಬೊಮ್ಮಣಪಂಡಿತನ ಮಗನಾದ ರಸಿಕಪಂಡಿತನಿಂದ ಬರೆಯಲಾಗಿದೆ ಎಂದು ಹೇಳಿರುವುದು ಕಂಡುಬರುತ್ತದೆ ಈ ಕವಿಯನ್ನು ಆಗಲೇ ಗಮನಿಸಲಾಗಿದೆ[2] ಕ್ರಿ ಶ ೧೭೦೫ಕ್ಕೆ ಸೇರಿದ ಚಾಮರಾಜನಗರದ (ಚಾ ನ ೧೧) ಶಾಸನವು ಅಳಸಿಂಗರಾರ್ಯನ ಮಗ ತಿರುಮಲಯಾರ್ಯನ ರಚನೆಯಾಗಿದ್ದು, ಮೈಸೂರರಸ ಚಿಕ್ಕದೇವರಾಜಒಡೆಯರ ಆಸ್ಥಾನದಲ್ಲಿ ಪ್ರವರ್ಧಮಾನಕ್ಕೆ ಬಂದ ಪ್ರಖ್ಯಾತ ಕವಿ ಮತ್ತು 'ಅಪ್ರತಿಮವೀರಚರಿತ' ಚಿಕದೇವರಾಜ ವಿಜಯ' ಮುಂತಾದ ಅನೇಕ ಸಾಹಿತ್ಯಕೃತಿಗಳ ಕರ್ತೃ ಲಿಂಗಯ್ಯ ಮಂತ್ರಿಯು ಕಾಳಹಸ್ತೀಶ್ವರ ಲಿಂಗವನ್ನು ಪ್ರತಿಷ್ಠಿಸಿದ ವಿಷಯವನ್ನು ತಿಳಿಸುವ ಸು ೧೭ನೆಯ ಶತಮಾನದ ಚಾ ನ ೨೭೨ನೆಯ ಶಾಸನವು ಸಂಸ್ಕೃತ ವೃತ್ತದಲ್ಲಿದ್ದು, ಅದು ಲಿಂಗೈ(ಯ್ಯ)ನ ಬರಹವೆಂದು ಹೇಳಲಾಗಿದೆ ಶಾಸನದಲ್ಲಿ ಬರುವ ದಾನಿಯೇ ಇವನಾಗಿರಬಹುದು ಕ್ರಿ ಶ ೧೬೪೫ಕ್ಕೆ ಸೇರಿದ ಚಾ ನ ೨೭೧ನೆಯ ಕನ್ನಡ ಶಾಸನದಲ್ಲಿ ಉಕ್ತನಾಗಿರುವ ಲಿಂಗಯ್ಯನೂ ಇದೇ ಲಿಂಗಯ್ಯ ಮಂತ್ರಿಯಾಗಿದ್ದಿರಬೇಕು ಈತನು ದೇವರಸಯ್ಯನ ಮೊಮ್ಮಗ, ಬೈರೋದೇವನ ಮಗ, ಮತ್ತು ಅದೇ ಊರಿನ ಕರಣಿಕ ಹರದನಹಳ್ಳಿಯ ಸಂಸ್ಕೃತ ಭಾಷೆಯ ತಾಮ್ರಶಾಸನವು (ಚಾ ನ ೨೯೧) ಸೋಮಶಾಖೆಯ ಕಾಶ್ಯಪಗೋತ್ರದ ಕೃಷ್ಣದೀಕ್ಷಿತನಿಂದ ರಚಿತವಾಗಿದೆ ಆತನನ್ನು ವಿದ್ವಾನ್ ಎಂದು ವರ್ಣಿಸಲಾಗಿದೆ

ಗದ್ಯಾತ್ಮಕವಾಗಿರುವ ಶಾಸನಗಳಲ್ಲಿ ಬರುವ ಬರಹ ಎಂಬ ಪದವನ್ನು ವಿವೇಚಿಸುವುದು ಇನ್ನೂ ಕಷ್ಟ ಕ್ರಿ ಶ ೧೩೪೪ರ ಪಿ ಪ ೧೨೨ ಮತ್ತು ಕ್ರಿ ಶ ೧೪೦೮ರ ಕೊ ಗಾ ೫೭ನೆಯ ಶಾಸನಗಳಲ್ಲಿ ಕ್ರಮವಾಗಿ ಸೇನಬೋವ ಅಲ್ಲಪ್ಪ ಮತ್ತು ನಾಡಸೇನಬೋವ ರಾಯಪ್ಪನ ಬರಹವೆಂದು ಹೇಳಲಾಗಿದೆ ಮೊದಲನೆಯದು ಕೇತಿಯದಣ್ಣಾಯಕನ ಒಪ್ಪವನ್ನು (ಸುಹಸ್ತದೊಪ್ಪ) ಹೊಂದಿದ್ದು ಇನ್ನೊಂದು ಸಹ ಸೇನಬೋವನೂ ಆದ ಮಾದಪ್ಪನ ಎಚಿುತ್ತು (ಒಪ್ಪ ?) ಎಂದು ನಿರ್ದೇಶಿಸಿದೆ ಈ ಸಂದರ್ಭಗಳಲ್ಲಿ ಈ ಬರಹಗಾರರನ್ನು – ಇವರು ಅಧಿಕಾರಿಗಳೂ ಕರಣಿಕರೂ ಆಗಿರುವುದರಿಂದ – ಶಾಸನದ ಕರಡುಪ್ರತಿಯನ್ನು ಬರೆದವರೆಂದು ಪರಿಗಣಿಸುವುದು ಸೂಕ್ತವೆನಿಸುವುದು ಈ ಶಾಸನಗಳು ಸಾಹಿತ್ಯಿಕ ದೃಷ್ಟಿಯಿಂದ ಅಂಥ ಪ್ರಮುಖವೇನಲ್ಲ ಚಾ ನ ೧೪೪ನೆಯ ಶಾಸನವು ಅನಂತಪ್ಪನ ಮಗನಾದ ವರದಣ್ಣ(ನ್ನ)ನನ್ನು ಹೆಸರಿಸುತ್ತದೆ ಈತನೂ ಶಾಸನದ ಕರಡನ್ನು ಬರೆದವನಾಗಿರಬಹುದು ಇನ್ನೊಂದು ಕಡೆ ಅಂದರೆ ಚಾ ನ ೧೦೪ನೆಯ ಶಾಸನವನ್ನು ಬರೆದವರು ಸೇನಬೋವ ಸಂಕಣ್ಣ ಮತ್ತು ಸಿದ್ಧನೆಂದಿದೆ ಕರಡುಪ್ರತಿಯನ್ನು ಸಿದ್ಧಪಡಿಸಿದವನು ಸಂಕಣ್ಣನೂ ಶಾಸನವನ್ನು ಬರೆದವನೊ, ಕಂಡರಿಸಿದವನೊ ಸಿದ್ಧನೆಂದೂ ಇಲ್ಲಿ ನಾವು ಊಹಿಸಬಹುದಾಗಿದೆ

ಚಾ ನ ೩೦೧ನೆಯ ಶಾಸನದಲ್ಲಿ ಕಂಡುಬರುವ ದಾನಿ ರಂಗರಾಜಯ್ಯದೇವ ಶಾಸನವು ರಂಗರಾಜಯ್ಯನ ಬರಹ ಎಂಬ ಹೇಳಿಕೆಯೊಂದಿಗೆ ಮುಕ್ತಾಯವಾಗುತ್ತದೆ ಈ ರಂಗರಾಜಯ್ಯನೇ ದಾನಿಯೆಂದಾದರೆ ದಾನಿಯೇ ಶಾಸನವನ್ನೂ

---

1 ಕರ್ನಾಟಕ ಕವಿ ಚರಿತ ಸಂ II (ಪರಿಷ್ಕೃತ 1973), ಪು 177–79

2 ಅದೇ ಪು 402–03

ಇವುಗಳಿಂದ ಶ್ರೀಕಂಠರಸನಿಗೆ ವೀರರಾಜ ಹಾಗೂ ಪಿರಿಯರಾಜರೆಂಬ ಇಬ್ಬರು ಮಕ್ಕಳಿದ್ದರೆಂದು ನಾವು ಊಹಿಸಬಹುದಾಗಿದೆ ಹಿರಿಯವನು ಕೆಲವು ವರ್ಷಗಳ ಅಧಿಕಾರದಲ್ಲಿದ್ದು ಅನಂತರ ಅವನ ತಮ್ಮ ಪಟ್ಟಕ್ಕೆ ಬಂದಂತೆ ತೋರುತ್ತದೆ ಪಿರಿಯರಾಜನಿಗೆ ಪಿರಿಯೊಡೆಯನೆಂಬ ಮಗನಿದ್ದು, ಅವನು ತನ್ನ ತಂದೆಗಿಂತ ಮೊದಲೇ ಮರಣಹೊಂದಿದನೆಂದು ಮತ್ತು ಅವನ ಪುಣ್ಯಾರ್ಥವಾಗಿ ಕ್ರಿ ಶ ೧೫೮೬ ಹಾಗೂ ಅನಂತರದ ಕಾಲದಲ್ಲಿ ಅನೇಕ ದಾನಧರ್ಮಗಳನ್ನು ಮಾಡಲಾಯಿತೆಂದು ತಿಳಿಯಬರುತ್ತದೆ (ಪಿ ಪ ೨೭, ೬೨, ೬೧ ಹಾಗೂ ೧೧೦) ಕ್ರಿ ಶ ೧೫೯೧ರ ಪಿ ಪ ೪೦ನೆಯ ಶಾಸನದಲ್ಲಿ ಪಿರಿಯರಾಜ ತನ್ನ ಅರಸಿಗೆ (ಪಟ್ಟದ ರಾಣೀವಾಸ) ಕೈಲಾಸಪ್ರಾಪ್ತಿಯಾಗಬೇಕೆಂದು ದಾನವೊಂದನ್ನು ನೀಡಿದುದನ್ನು ನಿರೂಪಿಸಿರುವುದರಿಂದ, ಆತನ ಪತ್ನಿಯ ಮರಣಸಂಗತಿಯನ್ನು ಈ ಶಾಸನ ಉಲ್ಲೇಖಿಸಿದೆ ಎಂದು ಹೇಳಬಹುದಾಗಿದೆ ಇಂದಿನ ಪಿರಿಯಾಪಟ್ಟಣ ಮೂಲತಃ ಸಿಂಗಪಟ್ಟಣವೆಂಬ ಹೆಸರಿನಿಂದ ಪರಿಚಿತವಾಗಿತ್ತು ಈ ಪುರವನ್ನು ಪಿರಿಯರಾಜದೇವನು ಪುನರ್ನಿರ್ಮಿಸಿ ತನ್ನ ಹೆಸರಿನಿಂದ ಪಿರಿಯರಾಜಪಟ್ಟಣವೆಂದು ಕರೆಯುವಂತೆ ವಿಧಿಸಿದನು (ಪಿ ಪ ೧)

ಕ್ರಿ ಶ ೧೫೯೮ರ ಸುರಗಹಳ್ಳಿ ಶಾಸನದಲ್ಲಿ (ಪಿ ಪ ೩೫) ದಾನಿಯಾದ ರುದ್ರಗಣನನ್ನು ಶ್ರೀಕಂಠರಾಜ ಒಡೆಯನ ಮಗನೆಂಬುದಾಗಿ ಉಲ್ಲೇಖಿಸಿದೆ ಕ್ರಿ ಶ ೧೬೦೦ರ ಪಿ ವ ೧೦ರಲ್ಲಿ ಈತನನ್ನು ಮಲ್ಲಿಕಾರ್ಜುನದೇವರ ಭಕ್ತ(ವಂದಾರ)ನಾದ ಚೆಂನೆಯನ ಮಗನೆಂದು ಹೇಳಿದೆ ಆದರೆ ಇದೇ ಶಾಸನವು ಆತ ತನ್ನ ತಂದೆ ಶ್ರೀಕಂಠ ಮತ್ತು ತಾಯಿ ವಲ್ಲಭಾಜಮ್ಮನವರಿಗೆ ಪುಣ್ಯವಾಗಬೇಕೆಂದು ದಾನನೀಡಿದುದನ್ನು ಉಲ್ಲೇಖಿಸುವುದರಿಂದ ಶ್ರೀಕಂಠನಿಗೆ ಚೆಂನೆಯನೆಂಬ ಹೆಸರೂ ಇದ್ದಿರಬಹುದಾದ ಸಾಧ್ಯತೆ ಇದೆ ಆದ್ದರಿಂದ ರುದ್ರಗಣ ಶ್ರೀಕಂಠನ ಮೂರನೆಯ ಮಗನಾಗುವನು

ಪಿ ಪ ೮ ಶ್ರೀಕಂಠನ ಮೊಮ್ಮಗ ಮತ್ತು ವೀರರಾಜಯ್ಯನ ಮಗ ವೀರಪರಾಜಯ್ಯ ನೀಡಿದ ದತ್ತಿಯೊಂದನ್ನು ಕುರಿತದ್ದಾಗಿದೆ ಈ ಶಾಸನದ ಕಾಲ ಕ್ರಿ ಶ ೧೬೧೨ ಪಿ ಪ ೯ನೆಯ ಶಾಸನವೂ ಅದೇ ವಂಶಾವಳಿಯನ್ನು ಕೊಟ್ಟರೂ ನಂಜುಂಡನೆಂದು ನಾವು ಗುರುತಿಸಿರುವ ನಂಜರಾಜನಿಂದ ಆರಂಭಗೊಳ್ಳುತ್ತದೆ ವೀರಪ್ಪನನ್ನು ಅಲ್ಲಿ ವೀರರಾಜಯನೆಂದು ಉಲ್ಲೇಖಿಸಿದೆ ಆದ್ದರಿಂದ ವೀರರಾಜಯನು ಶ್ರೀಕಂಠನ ಹಿರಿಯ ಮಗನ ಮಗನೆಂಬುದೂ ಆತ ತನ್ನ ಚಿಕ್ಕಪ್ಪ ರುದ್ರಗಣನ ನಂತರ ಪಟ್ಟಕ್ಕೆ ಬಂದನೆಂಬುದೂ ಸ್ಪಷ್ಟವಾಗುತ್ತದೆ ಆದರೆ ಕ್ರಿ ಶ ೧೬೧೩ಕ್ಕೆ ಸೇರುವ ನೆಲವಾಡಿ ಶಾಸನವು (ಪಿ ಪ ೯೦) ಈ ವಂಶದ ವೀರರಾಜಯ್ಯನನ್ನು ಉಲ್ಲೇಖಿಸುತ್ತದೆ ವಂಶಾವಳಿಯಿರುವ ಭಾಗ ಸ್ವಲ್ಪ ತ್ರುಟಿತವಾಗಿದೆ ಆದರೆ ವಂಶಾವಳಿ ನಂಜರಾಜಯ್ಯನಿಂದ ಆರಂಭಗೊಂಡು, ಅವನ ಮಗ ನಂಜರಾಜಯ್ಯ (ಬಹುಶಃ ನಂಜುಂಡ), ಅವನ ಮಗ ಶ್ರೀ ರಾಜಯ್ಯ (ಬಹುಶಃ ಶ್ರೀಕಂಠ), ಅವನ ಮಗನೆಂದು ಹೇಳಲಾದ ಕೃಷ್ಣರಾಜಯ್ಯ ಎಂಬುವರನ್ನು ಹೆಸರಿಸುತ್ತದೆ ಕೃಷ್ಣರಾಜಯ್ಯ ಹಾಗೂ ಶಾಸನೋಕ್ತ ದಾನಿಯ ಸಂಬಂಧ ಸ್ಪಷ್ಟವಾಗಿಲ್ಲ, ಆದರೆ ಅವರು ಕ್ರಮವಾಗಿ ತಂದೆ ಮಕ್ಕಳಿರಬಹುದು ಈ ಕೃಷ್ಣರಾಜನನ್ನು ಗುರುತಿಸುವುದೊಂದು ಸಮಸ್ಯೆಯಾಗಿದೆ ಈತ ಮೇಲೆ ಹೇಳಿದ ಶ್ರೀಕಂಠನ ಮಗನೇ ಆಗಿದ್ದಲ್ಲಿ ಅವನ ಮೂವರು ಮಕ್ಕಳಿಂದ ಭಿನ್ನನೇ ? ಈ ಬಗ್ಗೆ ಖಚಿತವಾಗಿ ಹೇಳುವುದು ಸಾಧ್ಯವಿಲ್ಲವಾಗಿದೆ

ಮೇಲಿನ ವಿಶ್ಲೇಷಣೆಯ ಬೆಳಕಿನಲ್ಲಿ ಈಚಿನ ಚಂಗಾಳ್ವರಸರ ವಂಶಾವಳಿಯನ್ನು ಹೀಗೆ ತೋರಿಸಬಹುದು



## ಕವಿಗಳು ಮತ್ತು ರೂವಾರಿಗಳು

ಪ್ರಸ್ತುತ ಸಂಪುಟದಲ್ಲಿ ಛಂದಸ್ಸಿಗನುಗುಣವಾಗಿ ಶಾಸನಗಳನ್ನು ಬರೆದಿರುವ ಸುಮಾರು ಆರು ಜನ ಕವಿಗಳು ಬೆಳಕಿಗೆ ಬಂದಿದ್ದಾರೆ ಅವರಲ್ಲಿ ಮೊದಲಿಗನು ಹೊನ್ನೂರ ಶಾಸನ (ಚಾ ನ ೧೪೮)ವನ್ನು ರಚಿಸಿರುವ ಆಕ್ಷಾರದ ಗೋಪಣ್ಣ ಶಾಸನದಲ್ಲಿ ಗೋಪಣ್ಣನ ಬರಹ ಎಂದು ಮಾತ್ರ ಹೇಳಿದ ಆದರ ಶಾಸನವು ವೃತ್ತಪದ್ಯರೂಪದಿಂದ ಅವನನ್ನು ಆ ಶಾಸನ ಕರ್ತೃವೆಂದು ಪರಿಗಣಿಸಬಹುದು ಕ್ರಿ ಶ ೧೫೧೧ರ ಚಾ ನ ೩೨೪ನೆಯ ಮಲೆಯೂರಿನ ಚಿಕ್ಕ ಶಾಸನವು ಸಂಸ್ಕೃತ ವೃತ್ತದಲ್ಲಿದೆ ಆ ಶಾಸನ ಪದ್ಯವು ವಿದ್ಯಾನಂದೋಪಾಧ್ಯಾಯ ಕೃತವೆಂದೂ ವೃಷಭದಾಸವರ್ಣಿಯಿಂದ ಲಿಖಿತವಾಯಿತೆಂದೂ ಹೇಳಿದೆ ವೃಷಭದಾಸವರ್ಣಿಯು ಕಲ್ಲಿನ ಮೇಲೆ ಬರೆದವನಾಗಿರಬೇಕು ಇಲ್ಲಿ ಲಿಖಿತಂ ಎಂಬ ಪದವು ಶಾಸನವನ್ನು ರಚಿಸಿದವನಿಗೆ ಅನ್ವಯಿಸದೆ ಕಲ್ಲಿನ ಮೇಲೆ ಬರೆದವನಿಗೆ ಅನ್ವಯಿಸುತ್ತದೆಂಬುದನ್ನು ಸ್ಪಷ್ಟವಾಗಿ ಕಾಣಬಹುದು ಕನ್ನಡ ಕವಿಯೂ 'ಕಾವ್ಯಸಾರ'ದ ಕರ್ತೃವೂ ಆದ ಅಭಿನವವಾದಿ ವಿದ್ಯಾನಂದನೂ ಇದೇ ಕಾಲಕ್ಕೆ ಸೇರಿದವನೆಂಬುದನ್ನು ಗಮನಿಸಬಹುದು (ಕ್ರಿ ಶ ೧೫೩೩)[1] ಪ್ರಸ್ತುತ ಶಾಸನದ ಕರ್ತೃವಾದ ವಿದ್ಯಾನಂದೋಪಾಧ್ಯಾಯನೇ ಈ ಅಭಿನವವಾದಿ ವಿದ್ಯಾನಂದನೆಂದು ನಿಶ್ಚಿತವಾಗಿ ಹೇಳಲು ಸಾಧ್ಯವಿಲ್ಲ

೧೫೭೮–೭೯ರ ಯಳಂದೂರಿನ (ಯಳಂ ೧) ಶಾಸನವು ಸರಸಕವಿ ಎಂದು ವರ್ಣಿತನಾಗಿರುವ ಸಾಸಲಯ್ಯನ ರಚನೆ ಇಲ್ಲಿಯೂ ಇದು ಬೊಮ್ಮಣಪಂಡಿತನ ಮಗನಾದ ರಸಿಕಪಂಡಿತನಿಂದ ಬರೆಯಲಾಗಿದೆ ಎಂದು ಹೇಳಿರುವುದು ಕಂಡುಬರುತ್ತದೆ ಈ ಕವಿಯನ್ನು ಆಗಲೇ ಗಮನಿಸಲಾಗಿದೆ[2] ಕ್ರಿ ಶ ೧೬೭೫ಕ್ಕೆ ಸೇರಿದ ಚಾಮರಾಜನಗರದ (ಚಾ ನ ೧೧) ಶಾಸನವು ಅಳಸಿಂಗರಾರ್ಯನ ಮಗ ತಿರುಮಲಯಾರ್ಯನ ರಚನೆಯಾಗಿದ್ದು, ಮೈಸೂರರಸ ಚಿಕ್ಕದೇವರಾಜಒಡೆಯರ ಆಸ್ಥಾನದಲ್ಲಿ ಪ್ರವರ್ಧಮಾನಕ್ಕೆ ಬಂದ ಪ್ರಖ್ಯಾತ ಕವಿ ಮತ್ತು 'ಅಪ್ರತಿಮವೀರಚರಿತ' ಚಿಕದೇವರಾಜ ವಿಜಯ' ಮುಂತಾದ ಅನೇಕ ಸಾಹಿತ್ಯಕೃತಿಗಳ ಕರ್ತೃ ಲಿಂಗಯ್ಯ ಮಂತ್ರಿಯು ಶಾಳಹಸ್ತೀಶ್ವರ ಲಿಂಗವನ್ನು ಪ್ರತಿಷ್ಠಿಸಿದ ವಿಷಯವನ್ನು ತಿಳಿಸುವ ಸು ೧೭ನೆಯ ಶತಮಾನದ ಚಾ ನ ೨೭೩ನೆಯ ಶಾಸನವು ಸಂಸ್ಕೃತ ವೃತ್ತದಲ್ಲಿದ್ದು, ಅದು ಲಿಂಗೈ(ಯ್ಯ)ನ ಬರಹವೆಂದು ಹೇಳಲಾಗಿದೆ ಶಾಸನದಲ್ಲಿ ಬರುವ ದಾನಿಯೇ ಇವನಾಗಿರಬಹುದು ಕ್ರಿ ಶ ೧೬೮೫ಕ್ಕೆ ಸೇರಿದ ಚಾ ನ ೨೭೧ನೆಯ ಕನ್ನಡ ಶಾಸನದಲ್ಲಿ ಉಕ್ತನಾಗಿರುವ ಲಿಂಗಯ್ಯನೂ ಇದೇ ಲಿಂಗಯ್ಯ ಮಂತ್ರಿಯಾಗಿದ್ದಿರಬೇಕು ಈತನು ದೇವರಸಯ್ಯನ ಮೊಮ್ಮಗ, ಬೈರೋದೇವನ ಮಗ, ಮತ್ತು ಅದೇ ಊರಿನ ಕರಣಿಕ ಹರದನಹಳ್ಳಿಯ ಸಂಸ್ಕೃತ ಭಾಷೆಯ ತಾಮ್ರಶಾಸನವು (ಚಾ ನ ೨೯೧) ಸೋಮಶಾಖೆಯ ಕಾಶ್ಯಪಗೋತ್ರದ ಕೃಷ್ಣದೀಕ್ಷಿತನಿಂದ ರಚಿತವಾಗಿದೆ ಆತನನ್ನು ವಿದ್ವಾನ್ ಎಂದು ವರ್ಣಿಸಲಾಗಿದೆ

ಗದ್ಯಾತ್ಮಕವಾಗಿರುವ ಶಾಸನಗಳಲ್ಲಿ ಬರುವ ಬರಹ ಎಂಬ ಪದವನ್ನು ವಿವೇಚಿಸುವುದು ಇನ್ನೂ ಕಷ್ಟ ಕ್ರಿ ಶ ೧೩೮೮ರ ಟಿ ಪ ೧೩೩ ಮತ್ತು ಕ್ರಿ ಶ ೧೮೦೮ರ ಕೊ ಗಾ ೫೭ನೆಯ ಶಾಸನಗಳಲ್ಲಿ ಕ್ರಮವಾಗಿ ಸೇನಬೋವ ಅಲ್ಲಪ್ಪ ಮತ್ತು ನಾಡಸೇನಬೋವ ರಾಯಪ್ಪನ ಬರಹವೆಂದು ಹೇಳಲಾಗಿದೆ ಮೊದಲನೆಯದು ಕೇತೆಯದಣ್ಣಾಯಕನ ಒಪ್ಪವನ್ನು (ಸುಹಸ್ತದೊಪ್ಪ) ಹೊಂದಿದ್ದು ಇನ್ನೊಂದು ಸಹ ಸೇನಬೋವನೂ ಆದ ಮಾದಪ್ಪನ ಎಬಿತ್ತು (ಒಪ್ಪ ?) ಎಂದು ನಿರ್ದೇಶಿಸಿದೆ ಈ ಸಂದರ್ಭಗಳಲ್ಲಿ ಈ ಬರಹಗಾರರನ್ನು – ಇವರು ಅಧಿಕಾರಿಗಳೂ ಕರಣಿಕರೂ ಆಗಿರುವುದರಿಂದ – ಶಾಸನದ ಕರಡುಪ್ರತಿಯನ್ನು ಬರೆದವರೆಂದು ಪರಿಗಣಿಸುವುದು ಸೂಕ್ತವೆನಿಸುವುದು ಈ ಶಾಸನಗಳು ಸಾಹಿತ್ಯಿಕ ದೃಷ್ಟಿಯಿಂದ ಅಂಥ ಪ್ರಮುಖವೇನಲ್ಲ ಚಾ ನ ೧೮೮ನೆಯ ಶಾಸನವು ಅನಂತಪ್ಪನ ಮಗನಾದ ವರದಣ್ಣ(ನ್ನ)ನನ್ನು ಹೆಸರಿಸುತ್ತದೆ ಈತನೂ ಶಾಸನದ ಕರಡನ್ನು ಬರೆದವನಾಗಿರಬಹುದು ಇನ್ನೊಂದು ಕಡೆ ಅಂದರೆ ಚಾ ನ ೧೦೮ನೆಯ ಶಾಸನವನ್ನು ಬರೆದವರು ಸೇನಬೋವ ಸಂಕಣ್ಣ ಮತ್ತು ಸಿದ್ಧನೆಂದಿದೆ ಕರಡುಪ್ರತಿಯನ್ನು ಸಿದ್ಧಪಡಿಸಿದವನು ಸಂಕಣ್ಣನೂ ಶಾಸನವನ್ನು ಬರೆದವನೊ, ಕಂಡರಿಸಿದವನೊ ಸಿದ್ಧನೆಂದೂ ಇಲ್ಲಿ ನಾವು ಊಹಿಸಬಹುದಾಗಿದೆ

ಚಾ ನ ೩೦೧ನೆಯ ಶಾಸನದಲ್ಲಿ ಕಂಡುಬರುವ ದಾನಿ ರಂಗರಾಜಯ್ಯದೇವ ಶಾಸನವು ರಂಗರಾಜಯ್ಯನ ಬರಹ ಎಂಬ ಹೇಳಿಕೆಯೊಂದಿಗೆ ಮುಕ್ತಾಯವಾಗುತ್ತದೆ ಈ ರಂಗರಾಜಯ್ಯನೇ ದಾನಿಯೆಂದಾದರೆ ದಾನಿಯೇ ಶಾಸನವನ್ನೂ

1 ಕರ್ನಾಟಕ ಕವಿ ಚರಿತ ಸಂ II (ಪರಿಷ್ಕೃತ 1973), ಪು 177–79

2 ಅದೇ ಪು 402–03

ಬರೆದನೆಂದೆಣಿಸಬಹುದು ಇಲ್ಲವೆ ಈ ಸಂದರ್ಭದಲ್ಲಿ ಬರಹ ಎಂಬುದನ್ನು ಒಪ್ಪ ಎಂದು ಅರ್ಥೈಸಬಹುದೇ ? ೮೪೦ ನೆಯ ಮಾಂಬಳ್ಳಿ ಲೇಖವು ಅದರ ಮೊದಲಭಾಗದ ಬರಹ ವೀರಪಲಿಂಗಪನದೆಂದೂ ಎರಡನೆಯ ಭಾಗವನ್ನು ಗೋಪಣ್ಣನು ಬರೆಪನೆಂದೂ ಸೂಚಿಸುತ್ತದೆ ಸಂಪೂರ್ಣ ಶಾಸನದ ಕರಡುಪ್ರತಿಯನ್ನು ಒಬ್ಬನು ಸಿದ್ಧಪಡಿಸಿ ಇನ್ನೊಬ್ಬನು ಅದನ್ನು ಬರೆದಿರುವ ಸಾಧ್ಯತೆಯೂ ಉಂಟು ಪಿ ಪ ೫೪ನೆಯ ಶಾಸನವು ಭಾಷೆ ಹಾಗೂ ವ್ಯಾಕರಣ ಸ್ಖಾಲಿತ್ಯಗಳಿಂದ ಕೂಡಿದ್ದು ತಪ್ಪಾಗಿ ಕಂಡರಿಸಿರುವ ಶಾಸನ ಇಲ್ಲಿ ಚನ್ನಪ್ಪನ ಬರಹವೆಂದು ಹೇಳಲಾಗಿರುವುದನ್ನು ಶಾಸನವನ್ನು ಕಲ್ಲಿನ ಮೇಲೆ ಬರೆದವನೆಂದು ಭಾವಿಸಬಹುದು ಇಲ್ಲವೇ ಅವನು ಕಂಡರಿಸಿದವನಾಗಿರಲೂಬಹುದು.

ತಮಿಳು ಶಾಸನಗಳಿಗೆ ಸಂಬಂಧಿಸಿದಂತೆ ಹೇಳುವುದಾದರೆ, ಕೊ ಗಾ ೪೧ನೆಯ ಶಾಸನವು ದುಕ್ಕನ್ ಎಂಬುವನ ಬರಹವಾಗಿದೆ(ಎಏತ್ತು) ಈತನು ಇಡ್ಯಕುಂದುನಾಡಿನ ಕರಣಿಕ (ಕಣಕ್ಕನ್) ಈತನು ತನ್ನ ಅಧಿಕಾರದ ಮೇರೆಗೆ ಶಾಸನದ ಕರಡುಪ್ರತಿಯನ್ನು ಸಿದ್ಧಪಡಿಸಿರುವುದು ವಿಶದಪಡುತ್ತದೆ ಚಾ ನ ೧೯೦ನೆಯ ಶಾಸನವು ಶ್ರೀಪಾದಾಳ್ವಾನ್ ಎಂಬುವನ ಬರಹವೆಂದು ಉಕ್ತಪಡಿಸುತ್ತದೆ ಅನೇಕ ಗಾವುಂಡರ ಒಪ್ಪಿತವಿದೆ ಆದ್ದರಿಂದ ಈ ವ್ಯಕ್ತಿಯೂ ಶಾಸನದ ಕರಡುಪ್ರತಿಯನ್ನು ಸಿದ್ಧಪಡಿಸಿರಬಹುದು (ಇಲ್ಲವೇ ಕಂಡರಿಸಿರಬಹುದೇ ?)

ರೂವಾರಿಗಳಲ್ಲಿ ಹನ್ನಿಬೋಜ (ಚಾ ನ ೧೪೩), ರೂವಾರಿ ಎಂದು ಕರೆಯಲಾಗಿರುವ ಬುಪೋಜನ ಮಗ ನಾಗೋಜ (ಹು ೩೮), ದೂಡ್ಡೋಜನ ಮಗ ಮಲ್ಲೋಜ (ಚಾ ನ ೧೨೯) ಮತ್ತು ಮಲೋಜ (ಪಿ ಪ ೪೫) ಉಲ್ಲೇಖಿತರಾಗಿದ್ದು, ಅವರ ಹೆಸರೇ ತಿಳಿಸುವಂತೆ ಶಿಲ್ಪಕಾರ ಹಾಗೂ ಕಲ್ಲುಕುಟಿಕ ವೃತ್ತಿಯವರು ಇದೇ ರೀತಿ ಕೊಂಗುಣಿಯರ ಮಾಯಣಾ ಚಾರಿಯ ಮಗ ಕೇತಾಚಾರಿಯೂ ವಿಶ್ವಕರ್ಮನು (ಕಮ್ಮಾರ) (ಚಾ ನ ೧೨೨) ಚಾ ನ ೧೧೪ನೆಯ ಶಾಸನದ ಪ್ರಕಾರ ಶಿಲ್ಪಕ ವಟ್ಟಾಚಾರಿಯು ಅದನ್ನು ಬರೆದವನು (ಬರೆದೋನ್), ಆದರೆ, ಶಿಲ್ಪಕನೆಂದು ವರ್ಣಿತನಾಗಿರುವುದರಿಂದ ಆತನು ಕಂಡರಿಸಿದವನೆಂದು ಎಣಿಸಬಹುದಾಗಿದೆ ರಾಮಪಟ್ಟಣ ಶಾಸನದ (ಹು ೧೬) ಕಡೆಯಲ್ಲಿ ಚಾವಾಚರಿಯ ಹೆಸರಿದೆ ಸುಂದರವಾದ ಈ ಶಾಸನವನ್ನು ಚಾವಾಚರಿಯೇ ಕಂಡರಿಸಿರಬೇಕು ೪೮೯೭ನೆಯ ಶಾಸನವು ತಮಿಳು ಮತ್ತು ಗ್ರಂಥಾಕ್ಷರ ಗಳಲ್ಲಿರುವ ಸಂಸ್ಕೃತ ಶಾಸನ ಇದನ್ನು ತಟ್ಟಾನ್ (ಕಮ್ಮಾರ) ಆಪ ಸಿಂಗಲಾಂತಕನ ಬರಹ (ಎಬುತ್ತು) ಎಂದಿದೆ ಆದುದರಿಂದ ಅವನೂ ಕಂಡರಣೆಕಾರನೇ ಆಗಿರಬೇಕು ಕೆರೆಹಳ್ಳಿ ತಾಮ್ರಶಾಸನವನ್ನು (ಚಾ ನ ೩೫೪) ಬರೆದವನು ವಿಶ್ವಕರ್ಮ ಈತನು ಗಟ್ಟವಾಡಿ ತಾಮ್ರಶಾಸನವನ್ನು ಬರದಿರುವ ವಿಶ್ವಕರ್ಮಾಚಾರ್ಯನಾಗಿರಬಹುದು[1] ನಾನು ಮೊದಲೇ ಹೇಳಿರುವಂತೆ ವಿಶ್ವಕರ್ಮ, ವಿಶ್ವಕರ್ಮಾಚಾರ್ಯ ಎಂಬುದನ್ನು ಕೇವಲ ಕಮ್ಮಾರನೆಂದು ಪರಿಗಣಿಸಬಹುದು ಪ್ರಸ್ತುತ ಸಂಪುಟದಲ್ಲಿ ಉಲ್ಲೇಖಿತರಾಗಿರುವ ಮತ್ತೆ ಕೆಲವು ಕಂಡರಣೆಕಾರರೆಂದರೆ ಸಿದ್ದ (ಚಾ ನ ೧೦೪), ನಾರಣಾಚಾರಿ (ಚಾ ನ ೧೪೭) ಮತ್ತು ಕೇತ (ಪಿ ಪ ೧೩೪)

## ಸಾಮಾಜಿಕ – ಆರ್ಥಿಕ

೧೦ನೆಯ ಶತಮಾನದ ಚಾ ನ ೧೧೪ನೆಯ ಶಾಸನ ಬಾಚ್ಗಿಂಟಿಯೂರಿನ ಭುಜಂಗೇಶ್ವರ ದೇವಾಲಯದ ಅರ್ಚಕ ಕೋಚಿಭಟಾರಕನಿಗೆ ಕೊಟ್ಟ ದತ್ತಿಯನ್ನು ಉಲ್ಲೇಖಿಸುತ್ತದೆ ಈತನು ನೀರ್ಗುಂದದ ಗೊರವನೆಂದು, ಪ್ರಪ್ರಥಮವಾಗಿ ದಾನಿಗಳಿಂದ ನಿಯಮಿಸಲಾದವನೆಂದು ಶಾಸನವು ತಿಳಿಸುತ್ತದೆ ಗೊರವ ಎಂದರೆ ಶೈವ ಗುರು ಅಭಿಮಾನಶಕ್ತಿಯ ಶಿಷ್ಯನಾದ ಕೋಚಿಭಟ್ಟಾರಕನಿಗೆ ಈ ಹೆಸರಿದ್ದುದು ಸ್ಪಷ್ಟ ಮತ್ತು ಆತನನ್ನು ದೇವಾಲಯದ ಆಡಳಿತಕಾರ್ಯವನ್ನು ನಿರ್ವಹಿಸಲು ನೇಮಿಸಲಾಯ್ತು ಮೊದಲು ಪರರ ವಶದಲ್ಲಿದ್ದ ಭೂಮಿಯನ್ನು ಈಗ ವಿಮುಕ್ತಗೊಳಿಸಿ ಅದನ್ನು ಈ ಪ್ರತಿಗ್ರಹಿಗೆ ಕೊಡಲಾಯ್ತು ದೇವಾಲಯದ ಆಡಳಿತ ಕಾರ್ಯವನ್ನು ನಿರ್ವಹಿಸುವುದು ಮಾತ್ರವಲ್ಲದೆ ಹತ್ತು ಮಂದಿ ಪಾತ್ರದವರ (ದೇವಡಿತಿಯರು) ಯೋಗಕ್ಷೇಮದ ಜವಾಬ್ದಾರಿಯೂ ಅವರದಾಗಿತ್ತು ಸು ೧೨-೧೩ನೆಯ ಶತಮಾನದ ಚಾ ನ ೧೪೨ನೆಯ ಶಾಸನವು ನಂಬಿಯರನ್ನೂ(ಅರ್ಚಕ) ಒಬ್ಬ ಸೇವಕನನ್ನೂ ಒಬ್ಬ ಕರಣಿಕನನ್ನೂ ಇಬ್ಬರು ವಾದ್ಯಗಾರರನ್ನೂ ಒಬ್ಬ ಧ್ವಜ ಹೊರುವವನನ್ನೂ ವಾದ್ಯವಿಶೇಷವನ್ನು ನುಡಿಸುವವನನ್ನೂ ಒಬ್ಬ ಹಾಡುಗಾರನನ್ನೂ ನಾಲ್ವರು ಪಾತ್ರದವರನ್ನೂ ಅಲ್ಲದೆ ಹನವಡೆಯ, ದವನಿಗ ಮತ್ತು ಅಂಘರಿಕರನ್ನೂ, ಪೋಷಿಸಲು ಭೂಮಿಯನ್ನು

[1] ಎ ಕ III (1974) ನಂ ಗೂ 402, ಪೀಠಿಕೆ ಪು ೨೮

ದತ್ತಿಬಿಟ್ಟಿದ್ದನ್ನು ತಿಳಿಸುತ್ತದೆ ದವನಿಗನೆಂದರ ಹೂವಾಡಿಗ ಹಾಗೂ ಅಂಘರಿಕನೆಂದರ ಅಂಗರಕ್ಷಕ ಅಥವಾ ಕಾವಲುಗಾರ ಹನವಡಿಯ ಎಂಬುದರ ಅರ್ಥ ಸ್ಪಷ್ಟವಾಗಿಲ್ಲ

ಕ್ರಿ ಶ ೧೩೭೭ರ ಯಳಂ ೯ನೆಯ ಶಾಸನ ನಾವಿದ ಉಡಯಚ್ಚನ್ ಎಂಬುವನ ಮಗ ಕೀತ್ತ್ಯೆಯು ಹುಲಿಯನ್ನು ಕೊಂದುದನ್ನು ತಿಳಿಸುತ್ತದೆ ಈ ಯೋಧನಿಗೂ ಮತ್ತು ಆತನ ಮನೆಯವರಿಗೂ ಗಾವುಂಡರು, ಸ್ಥಾನಿಕರು ಮತ್ತು ಇಳಮೆಯರು ನೇತ್ತಲ್‌ಕುಡಂಗೈಯಾಗಿ ಭೂಮಿಯನ್ನು ನೀಡಿದರು ಅದರಂತೆಯೇ ಸಂ ೧೭ನೆಯ ಶತಮಾನದ ಓ ವ ೩೯ನೆಯ ಶಾಸನವೂ ಜೋಗನಹಳ್ಳಿಯ ಯಿಸುವಣ್ಣನು ಹುಲಿಯನ್ನು ಕೊಂದುದಕ್ಕಾಗಿ ಬೈಚಣ್ಣನಿಂದ ನೆತ್ತರುಕೊಡಗೆಯಾಗಿ ಭೂಮಿಯನ್ನು ಪಡೆದುದನ್ನು ಉಲ್ಲೇಖಿಸಿದೆ

ಕ್ರಿ ಶ ೧೩೭೮ರ ಹಳೇ ಆಲೂರಿನ ಚಾ ನ ೧೯೫ನೆಯ ಶಾಸನ ಹೊಸದಾಗಿ ದೊರೆತುದು ವೇಳರು, ಕೋವರು, ಕುಡಿಂದರು ಮತ್ತು ನಲ್ಲೂಡೆಯರು ಮುಂತಾದ ಬೇರೆ ಬೇರೆ ವರ್ಗಗಳಿಗೆ ಸೇರಿದ ಜನರು ಚಂದ್ರನಾಥ ಬಸದಿಯನ್ನು ಊರ್ಜಿತಗೊಳಿಸಿದುದನ್ನು ಅದು ದಾಖಲುಮಾಡಿದ್ದು, ಪಾರಿಶ್ವದೇವನ ಮಕ್ಕಳೂ, ಕವಿ ಮತ್ತು ಗಮಕಿ ಎಂದು ವರ್ಣಿತ ರಾಗಿರುವ ಮಲ್ಲಿಸೇನ ಮಲಧಾರಿಗಳ ಶಿಷ್ಯರೂ ಆದ ಆದಿಯಣ್ಣ ಮತ್ತು ಚಲುವಣ್ಣರಿಗೆ ಭೂಮಿ, ತೋಟ ಮುಂತಾದು ವನ್ನು ದತ್ತಿಯಾಗಿ ನೀಡಿದುದನ್ನು ಉಲ್ಲೇಖಿಸಿದೆ ಶಿವ ಮತ್ತು ವಿಷ್ಣು ದೇವಾಲಯದ ಸ್ಥಾನಪತಿಗಳು ಈ ದತ್ತಿಗೆ ಸಾಕ್ಷಿಗಳಾಗಿದ್ದು, ಅವರು ಮುಂದೆ ಈ ದತ್ತಿಯ ರಕ್ಷಣೆಗೆ ಹೊಣೆಗಾರರೆಂಬುದನ್ನು ತಿಳಿಸುವುದು ಈ ಶಾಸನದ ಕುತೂಹಲಕರ ವಿಷಯವಾಗಿದೆ ಕೋವರೆಂದರೆ ಕುಂಬಾರರು, ವೇಳರು ವೇಳೆಗಾರರಾಗಿರಬಹುದು ಆದರೆ ಉಳಿದೆರಡು ಹೆಸರುಗಳ ಅರ್ಥ ಸ್ಪಷ್ಟವಾಗಿಲ್ಲ ಬಹುಶಃ ಅದು ಕೆಲವು ವೃತ್ತಿಗಾರರನ್ನು ನಿರ್ದೇಶಿಸಬಹುದು

ಕ್ರಿ ಶ ೧೫೪೮ರ ಚಾ ನ ೩೩೩ನೆಯ ಶಾಸನವು ಉಪ್ಪರಿಗೆಯ ಮಠವೆಂದು ಕರೆಯಲಾಗುವ ಉಮ್ಮತ್ತೂರಿನ ವೀರಶೈವಮಠದ ಆಚಾರ್ಯರಾದ ಚನ್ನಬಸವರಾಜದೇವರ ನಿರೂಪದಿಂದ ಬಾವಿಯನ್ನು ಊರ್ಜಿತಗೊಳಿಸಿದುದನ್ನು ಉಲ್ಲೇಖಿಸುತ್ತದೆ ಆ ಕಾಲದಲ್ಲಿ ೧ ಹಣಕ್ಕೆ ೭ ಮಾನ ಧಾನ್ಯವನ್ನು ಮಾರಿ ಮನುಷ್ಯರು ಮನುಷ್ಯರ ತಿಂದರು ಎಂದು ಆ ಶಾಸನವು ತಿಳಿಸುತ್ತದೆ ಅಂದು ದೇಶದಲ್ಲಿ ಉಂಟಾಗಿದ್ದ ತೀವ್ರ ಬರಗಾಲದ ಚಿತ್ರವನ್ನು ಇದು ನಿರ್ದೇಶಿ ಸುತ್ತದೆ

೧೭ನೆಯ ಶತಮಾನಕ್ಕೆ ಸೇರಿದ ಯಳಂ ೩ನೆಯ ಶಾಸನವು ಕುತೂಹಲಕರವಾಗಿದ್ದು, (ಬಿಸಿ) ತುಪ್ಪದಲ್ಲಿ ಕೈಯನ್ನು ಅದ್ದಿ ಆ ಮೂಲಕ ಕಠಿಣ ಪರೀಕ್ಷೆಯಲ್ಲಿ ಜಯಶಾಲಿಗಳಾದವರ ವಿಷಯವನ್ನು ನಿರೂಪಿಸುತ್ತದೆ ನಾವಿದರು ಮತ್ತು ಅಗಸರು ಆದ ಚಾಮು, ಅಂಸಮಾನ, ಹೊನ್ನ, ಧೂಮ ಮತ್ತು ಚಂಡ ಇವರು ಕುಂಬಾರರಿಗೆ ಕಾಲುಗುರು ಮೇಲುಕಟ್ಟುಗಳ ಹಕ್ಕು ಇಲ್ಲವೆಂದು ಹೇಳಿದರು ನಂತರ ಕುಂಬಾರಸೆಟ್ಟಿಗಳು ಮೇಲೆ ಹೇಳಿದ ಕಠಿಣ ಪರೀಕ್ಷೆಯಲ್ಲಿ ಜಯಗಳಿಸಿ ಅದಕ್ಕೆ ತಾವು ಅರ್ಹರೆಂಬುದನ್ನು ರುಜುವಾತುಪಡಿಸಿದರು ಈ ಪರೀಕ್ಷೆಯನ್ನು ಹರದನಹಳ್ಳಿಯ ದಿವ್ಯಲಿಂಗೇಶ್ವರನ ಸಮಕ್ಷಮದಲ್ಲಿ ನೆರವೇರಿಸಲಾಯಿತು ಶಾಸನವು ಮುಂದುವರಿದು ಜನಗಳು ಜಾತಿತೆರಿಗೆಯನ್ನು ಕೊಡಬೇಕೆಂಬುದನ್ನು ತಿಳಿಸುತ್ತದೆ, ಹೆಣ್ಣು ಬದುಕು ತಪ್ಪಿದಾಗ ಈ ತೆರಿಗೆಯಿಂದ ವಿನಾಯಿತಿಯನ್ನು ತೋರಿಸಿದುದಲ್ಲದೆ ಆಕೆಯ ಜೀವಿತ ಕ್ಕಾಗಿಯೂ ಹಣನೀಡಲೇರ್ಪಡಿಸಿದಂತೆಯೂ ತೋರುತ್ತದೆ

ಯಳಂ ೧೦ನೆಯ ತಾಮ್ರಶಾಸನದ ಕಾಲ ಕ್ರಿ ಶ ೧೭೭೫ ಯಳಂದೂರು ಸ್ಥಳಕ್ಕೆ ಸೇರಿದ ಕಾರೇಪುರದಲ್ಲಿ ಒಂದು ಮಠವಿದ್ದು ಅಲ್ಲಿ ಬಸವೇಶ್ವರ ಪೂಜೆ ನಡೆಯುತಿತ್ತು ಮೊದಲು ಅಮ್ಮಾಳಿಯ ಭೂಮಿ, ತೋಟಗಳನ್ನು ಈ ಮಠಕ್ಕೆ ದತ್ತಿ ನೀಡಲಾಗಿದ್ದು, ನಂತರ ಆಗ ಆಳುತ್ತಿದ್ದ ರಾಜನು ಕೆಲವು ವಿಶೇಷ ಪೂಜೆಗಳಿಗಾಗಿ ಕಾರೇಪುರವನ್ನೂ ಮೊದಲಿನ ಕೊಡಿಗೆಯೊಂದಿಗೆ ಸೇರಿಸಿ ದತ್ತಿನೀಡಿದನು ಕೆಲವು ಕಾಲಾನಂತರ ಬಹುಶಃ ಮೈಸೂರು ಅರಸರು ಕಾರೇಪುರದ ಭೂಮಿಯೆಲ್ಲವನ್ನೂ ಅರಮನೆಗೆ ಹಿಂದಿರುಗಿ ಪಡೆದರು ಇದು ನಂದನಸಂವತ್ಸರದಿಂದ ಜಾರಿಗೆ ಬರಲಾಯಿತೆಂದು ಹೇಳಲಾಗಿದೆ ಇದರಿಂದ ದೇವಾಲಯದ ವಿಶೇಷ ಪೂಜೆಯು ನಿಲ್ಲುವಂತಾಯಿತು. ಆದ್ದರಿಂದ ಎಲ್ಲ ಸೆಟ್ಟಿಗಳು ಮತ್ತು ದೇಶದವರು ಅಧಿಕ ತೆರಿಗೆಯನ್ನು ಅರಮನೆಗೆ ಕೊಡಲು ಒಪ್ಪಿಕೊಂಡರು ಈ ಅಧಿಕ ತೆರಿಗೆಯು ಬಹುಶಃ ಭೂಮಿಯಿಂದ ಅರಮನೆಗೆ ಬರುತ್ತಿದ್ದ ತೆರಿಗೆಯಷ್ಟೇ ಇದ್ದಿರಬೇಕು ಹೀಗೆ ಮಾಡಿದ ಮೇಲೆ ಸಂಬಂಧಪಟ್ಟ ಅಧಿಕಾರಿಗಳಿಗೆ ಮನವಿ ಮಾಡಲಾಗಿ ಕಾರೇಪುರದ ಭೂಮಿಗಳನ್ನು ಮಠಕ್ಕೆ ಹಿಂದಿರುಗಿಸಿದಂತೆ ತೋರುತ್ತದೆ

ಯಳಂ ೧೧೮ನೆಯ ಅಗರದ ತಮಿಳು ಶಾಸನವು ವ್ಯಕ್ತಿಯೋರ್ವನು ತಿರುವಿರಾಮೀಶ್ವರ ದೇವಾಲಯದ

ಸ್ಥಾನಪತಿಗೆ ದೇವಾಲಯದಲ್ಲಿರುವ ಮಂಟಪಕ್ಕೆ ಸುಣ್ಣ ಹಚ್ಚಿಸುವುದಕ್ಕಾಗಿ (ಸುಧೈ ಇಡ) ೧೦ ಗದ್ಯಾಣ ದತ್ತಿ ನೀಡಿದುದನ್ನು ತಿಳಿಸುತ್ತದೆ ಆ ಹಣದಿಂದ ಬರುವ ೩೩ ಗದ್ಯಾಣ ಬಡ್ಡಿಯನ್ನು ಆ ದೇವತೆಯ ನೈವೇದ್ಯಕ್ಕಾಗಿ ಉಪಯೋಗಿಸಲಾಗುತ್ತಿತ್ತು ಇದರಿಂದ ದಾನಿಯು ದೇವಾಲಯಕ್ಕೆ ತಗಲುವ ವೆಚ್ಚವನ್ನು ಪಾವತಿ ಮಾಡಿದನೆಂಬುದು ಸ್ಪಷ್ಟವಾಗುತ್ತದೆ ಈ ೩೩ ಗದ್ಯಾಣ ಮೊತ್ತವನ್ನು ದೇವಾಲಯದ ಆಡಳಿತಗಾರರು ಸರಿಯಾದ ರೀತಿಯಲ್ಲಿ ಬಳಸಬೇಕಾಗುತ್ತಿತ್ತು ಈ ಬಡ್ಡಿಯ ಕಾಲದ ಅವಧಿಯನ್ನು ಸೂಚಿಸಿಲ್ಲ ಒಂದು ವೇಳೆ ಇದು ಒಂದು ವರ್ಷಕ್ಕಾದರೆ ಬಡ್ಡಿದರವು ೩.೭ ೫% ಆಗುತ್ತದೆ

ಕ್ರಿ ಶ ೧೩೨೪ರ ಮದ್ದೂರು ಶಾಸನವು (ಯಳಂ ೬೨) ಕುತೂಹಲಕರವಾದ ವ್ಯವಹಾರವನ್ನು ದಾಖಲು ಮಾಡಿದೆ ಆರು ಜನರು ಸೇರಿ (ಹೆಸರನ್ನು ಸೂಚಿಸಿದೆ) ಉಪೇಂದ್ರಪಟ್ಟಣವೆಂಬ ಹೊಸ ಅಗ್ರಹಾರವನ್ನು ನಿರ್ಮಿಸಿದುದರ ಸಂಬಂಧವಾಗಿ ಮದ್ದೂರಾದ ಉಪೇಂದ್ರಪುರದ ಮಹಾಜನಗಳು ಶಾಸನವೊಂದನ್ನು ಕೊಟ್ಟ ವಿಷಯ ಉಕ್ತವಾಗಿದೆ ೧೨ ಕೈ ಅಗಲ ೩೦ ಕೈ ಉದ್ದದ ಆರು ಮನೆಗಳನ್ನು ಪಟ್ಟಣಸ್ವಾಮಿಗಳಿಗೆ ಮಾನ್ಯವೆಂದು ಕೊಟ್ಟ ವಿಷಯವೂ ಉಕ್ತವಾಗಿದೆ ಅಗ್ರಹಾರವನ್ನು ನಿರ್ಮಿಸಿದ ಆರು ಮಂದಿ ಆರು ಮನೆಯ ಪ್ರತಿಗ್ರಹಿಗಳಾಗಿರುವಂತೆ ಕಂಡುಬರುತ್ತದೆ ಮುಂದೆ ೬ ಕೈ ಅಗಲ ೨೦ ಕೈ ಉದ್ದದ ಎರಡು ಮನೆಗಳನ್ನು ಬಿರಣರಿಗೆ ಕೊಡಿಗೆಯಾಗಿ ನೀಡಲಾಯಿತು ಉಳಿದ ಮನೆಗಳನ್ನು ಬಿನುಗುಗಳಿಗೆ ನೀಡಲಾಯಿತು ಈ ಮನೆಗಳಿಗೆ ಮೂರು ವರ್ಷಗಳವರೆಗೆ ತೆರಿಗೆ ವಿನಾಯಿತಿ ನೀಡಲಾಗಿದ್ದು ನಂತರ ಆರು ವರ್ಷಗಳವರೆಗೆ ಪ್ರತಿವರ್ಷವೂ ಸಲ್ಲಿಸಬೇಕಾದ ಹೆಚ್ಚುವರಿ ತೆರಿಗೆಯನ್ನು ನಿರೂಪಿಸಿದೆ ಈ ವ್ಯತ್ಯಸ್ತ ದರಗಳು ಸಹ ಮನೆಯ ಅಳತೆಗೆ ಅನುಗುಣವಾಗಿದೆ ಬಿರಣರಿಗೂ ಬಿನುಗುಗಳಿಗೂ ವ್ಯತ್ಯಾಸವಿದ್ದಂತೆ ಕಂಡುಬರುತ್ತದೆ ಚಿಲುವಾನ ಪ್ರಜೆಗಳೇ ಬಿನುಗುಗಳು ಕ್ರಿ ಶ ೧೩೪೪ರ ಕೊ ಗಾ ೬೨ನೆಯ ಶಾಸನದಲ್ಲಿ ಕಮ್ಮಾರರು, ತೆಲ್ಲಿಗರು, ನಾಯಿಂದರು ಮತ್ತು ಆಸಗರನ್ನು ಬಿನುಗುಪ್ರಜೆಗಳೆಂದು ಹೇಳಲಾಗಿದೆ ೧೫೪೯ರ ಚಾ ನ ೧೬೧ ಸ್ವಾರಸ್ಯಕರವಾದ ಶಾಸನ ಇದರಲ್ಲಿ ಹೊಂಗನೂರಿನ ಭೂಮಿಯ ಸಾಗುವಳಿ ಮಾಡಲು ಕೆಲವು ನಿಬಂಧನೆಗಳನ್ನು ವಿಧಿಸಿದೆ ಇದರಂತೆ ಕುಳ ಪ್ರಜೆಗಳು ಹೊರತಾಗಿ ನೆರೆಯ ತೇಜಿಷ್ಟ ಪ್ರಜೆಗಳು ಮಾಗಣಿಕಾರರಾಗಲಿ, ಪಾರುಪತ್ಯಗಾರರಾಗಲಿ ಅಥವಾ ಗೌಡಸೇನಬೋವರಾಗಲಿ ಕೊಟ್ಟ ಪಟ್ಟೆಯಂತೆ ಮಾತ್ರ ಸಾಗುವಳಿ ಮಾಡಬೇಕಾಗಿತ್ತು ಚಾವಡಿಯ ಕರಣಿಕರು ಮತ್ತು ಗ್ರಾಮದ ಗೌಡ, ಸೇನಬೋವರನ್ನು ಕಲ್ಲಪಟ್ಟೆಯ ನಿಯಮಗಳಿಗನುಸಾರವಾಗಿಲ್ಲದ ಅನಧಿಕೃತ ಸಾಗುವಳಿಯನ್ನು ರಕ್ಷಿಸಲು ನೇಮಿಸಲಾಗಿತ್ತು ಇದು ಸ್ಥಳೀಯ ಹಾಗೂ ಪರಕೀಯ ಸಾಗುವಳಿದಾರರಿಗೆ ನೀಡಿದ ಅವಕಾಶವನ್ನೂ ಸಮಾಜದಲ್ಲಿ ಅವರವರ ಸ್ಥಾನಕ್ಕೆ ತಕ್ಕಂತೆ ಸಾಗುವಳಿ ಮಾಡಲು ಅನುಮತಿಯನ್ನೂ ಹಕ್ಕನ್ನೂ ಪಟ್ಟೆಯ ಮೂಲಕ ನೀಡಲಾಗುತ್ತಿತ್ತೆಂಬುದನ್ನು ಸೂಚಿಸುತ್ತದೆ

ಚಾ ನ ೧೫೨ನೆಯ ಸು ೧೬ನೆಯ ಶತಮಾನದ ಶ್ರೋತ್ರಿಯದ ಕಲ್ಲಪಟ್ಟೆಯು ತಿಮ್ಮಪ್ಪನಾಯಕವೊಡೆಯನ ಕಾರ್ಯಕರ್ತನಾದ ತಮ್ಮಣ್ಣನಾಯಕನು ಹದಿನಾಡ ರಾಮರಾಜನಾಯಕನಿಗೆ ಕಾರ್ತಿಕ ಶು ೧ರಿಂದ ವಾರ್ಷಿಕ ಕಂದಾಯ ನೀಡಬೇಕೆಂಬ ನಿಯಮದೊಂದಿಗೆ ಭೂಮಿಯನ್ನು ದತ್ತಿ ನೀಡಿದ ಉಲ್ಲೇಖವಿದೆ ಹೀಗೆ ನೀಡಿದ ಹಣದ ಮೊತ್ತವನ್ನು ಸೋಮೇಶ್ವರದೇವರ ಪೂಜೆ ಪುನಸ್ಕಾರಗಳಿಗೆ ಬಳಸಬೇಕಾಗಿತ್ತು ಆದರೆ ವಿವರಗಳೆಲ್ಲಾ ನಷ್ಟವಾಗಿವೆ

## ಅನಿರ್ದಿಷ್ಟ ವಿಷಯಗಳು

ಈ ಸಂಪುಟದಲ್ಲಿ ಸೇರಿಸಲಾಗಿರುವ ಕೆಲವು ಊರುಗಳ ಶಾಸನಗಳ ವಿಶ್ಲೇಷಣೆಯಿಂದ ಆ ಸ್ಥಳಗಳ ಬಗ್ಗೆ ಐತಿಹಾಸಿಕ ಹಾಗೂ ಸಾಂಸ್ಕೃತಿಕ ದೃಷ್ಟಿಗಳಿಂದ ಸ್ವಾರಸ್ಯವಾಗಿರುವ ಸಂಗತಿಗಳು ತಿಳಿದುಬರುತ್ತವೆ

ಚಾಮರಾಜನಗರದ ಪ್ರಮುಖ ಆಕರ್ಷಣೆಯಾದ ಚಾಮರಾಜೇಶ್ವರ ದೇವಾಲಯವನ್ನು ಕ್ರಿ ಶ ೧೮೨೮ರಲ್ಲಿ ಕಟ್ಟಲಾಯಿತು ಈ ದೇವಾಲಯವನ್ನು ಕೃಷ್ಣರಾಜವೊಡೆಯನು ಕಟ್ಟಿಸಿ ಲಿಂಗಪ್ರತಿಷ್ಠೆಯನ್ನು ಮಾಡಿಸಿದನೆಂದು ಚಾ ನ ೫ ರಿಂದ ನಮಗೆ ತಿಳಿದುಬರುತ್ತದೆ ಈ ಊರಿಗೆ ಚಾಮರಾಜನಗರವೆಂಬ ಹೆಸರು ಆ ಕಾಲದಿಂದೀಚೆಗೆ ಬಂದಿತು ಊರು ಮತ್ತು ದೇವಸ್ಥಾನಗಳೆರಡಕ್ಕೂ ತನ್ನ ತಂದೆ ಚಾಮರಾಜವೊಡೆಯನ ಹೆಸರನ್ನಿಟ್ಟು, ಆ ದೇವಾಲಯದ ಪ್ರಾಕಾರದಲ್ಲಿ ತನ್ನ ತಾಯಿ ಕೆಂಪನಂಜಮ್ಮಾಂಬ, ತನ್ನ ಹಾಗೂ ತನ್ನ ರಾಣಿಯರ ಹೆಸರಿನಲ್ಲಿ ಇತರ ಗುಡಿಗಳನ್ನು ನಿರ್ಮಿಸಿದನು

